# ಚಿಪ್ಪಿಗನ ಸಾಹಸ

(ಗ್ರಿಮ್ ಸಹೋದರರ ಕಥೆಗಳು)

ಎಂ. ರಾಮರಾವ್, ಎಂ.ಎ., ಬಿ.ಟಿ.

ಸತ್ಯಶೋಧನ ಪ್ರಕಟನ ಮಂದಿರ
**ಕೋಟೆ, ಬೆಂಗಳೂರು ನಗರ**

# ಪೀಠಿಕೆ

ಈ ಪುಸ್ತಕದಲ್ಲಿ ಗ್ರಿಮ್ ಸಹೋದರರ ಹನ್ನೆರಡು ಕಥೆಗಳನ್ನು ಪೋಣಿಸಿದ್ದೇನೆ. ಇವುಗಳಲ್ಲಿ ಮೊದಲಿನ ಹತ್ತು ಕಥೆಗಳು ನಾನು ಗ್ರಿಮ್ ಕಥೆಗಳನ್ನು ಕನ್ನಡಕ್ಕೆ ಭಾಷಾಂತರಿಸುವ ಉದ್ಯಮಕ್ಕೆ ಕೈಹಾಕಿದ ತರುಣದಲ್ಲಿ-ಎಂದರೆ ಏಳೆಂಟು ವರುಷಗಳ ಹಿಂದೆಯೇ-ಅನುವಾದಿತ ವಾದವು. ಅವಕ್ಕೂ ನಾನು ಇತ್ತೀಚೆಗೆ ಅನುವಾದಿಸಿದ, ಈಗಾಗಲೇ ಅಚ್ಚಾಗಿರುವ, ಇತರ ಕಥೆಗಳಿಗೂ ಶೈಲಿಯಲ್ಲಿ, ಸಂವಿಧಾನ ರಚನೆಯಲ್ಲಿ ನಿರೂಪಣೆಯಲ್ಲಿ ತಾರತಮ್ಯ ಏನಾದರೂ ಕಂಡು ಬಂದರೆ ಅದಕ್ಕೆ ಈ ಅಂತರವೇ ಕಾರಣ. ನ್ಯಾಯವಾಗಿ ಇವು ನನ್ನ ಪ್ರಥಮ ಪುಸ್ತಕ ವಾಗಿ ಹೊರಬೀಳಬೇಕಾಗಿತ್ತು. ಕೈಮೀರಿದ ಕೆಲವು ಸಂದರ್ಭಗಳು ಒದಗಿ ಇದೀಗ ಬೆಳಕಿಗೆ ಬರುತ್ತಿವೆ.

ಹಸ್ತಪ್ರತಿಯ ಏಕಾಂತದಲ್ಲಿ ದೀರ್ಘಕಾಲ ತಪಸ್ಸುಮಾಡುತ್ತಿದ್ದ ನಾನು ಬರೆದ ಗ್ರಿಮ್ ಸಹೋದರರ ಕಥೆಗಳಿಗೆ ಮುಕ್ತಿಯ ವರ ಪ್ರದಾನ ನೀಡಿದವರು ಸತ್ಯಶೋಧನ ಪ್ರಕಟನಮಂದಿರದ ಒಡೆಯ ರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರು. ಅವರ ಪ್ರೋತ್ಸಾಹವೂ ನೆರವೂ ದೊರೆಯದಿದ್ದರೆ ಆರುತಿಂಗಳ ಅಲ್ಪ ಅವಧಿಯಲ್ಲಿ ನಾಲ್ಕು ಪುಸ್ತಕಗಳ ಪ್ರಕಟಣೆ ನನಗೆ ಸುಲಭದ ಕೆಲಸವಾಗಿರಲಿಲ್ಲ. ಅವರಿಗೆ ನನ್ನ ಅನೇಕ ವಂದನೆಗಳು.

ಗ್ರಿಮ್ ಸಹೋದರರ ಕಥೆಗಳ ಇದೇ ಪರಿಮಾಣದ ಇನ್ನೆರಡು ಸಂಕಲನಗಳು ಮುದ್ರಣಕ್ಕೆ ಸಿದ್ಧವಾಗಿವೆ. ಅವೂ ಕೂಡ ಇಷ್ಟರಲ್ಲೇ ಪುಸ್ತಕ ರೂಪವನ್ನು ತಳೆದು ವಾಚನಾಭಿಮಾನಿಗಳ ಜಗತ್ತಿನಲ್ಲಿ ಅವ ತರಿಸಿ ಕೃತಕೃತ್ಯವಾದಾವೆಂದು ನಂಬಿದ್ದೇನೆ.

ಬೆಂಗಳೂರು ನಗರ,
೩೦—೮—೧೯೪೭

ಎಂ. ರಾಮರಾವ್

## ವಿಷಯ ಸೂಚಿಕೆ

# ಚಿಪ್ಪಿಗನ ಸಾಹಸ

ಒಂದು ಊರಿನಲ್ಲಿ ಒಬ್ಬ ಚಿಪ್ಪಿಗನಿದ್ದ. ಅವನಿಗೆ ಸಿಹಿ ಪದಾರ್ಥಗಳನ್ನು ಕಂಡರೆ ಬಹಳ ಇಷ್ಟ. ಅವನು ಒಂದುದಿನ ತನ್ನ ಅಂಗಡಿಯ ಮುಂಭಾಗದಲ್ಲಿ ಅಂಗಿಗೆ ಗುಂಡಿ ಹೊಲೆಯುತ್ತ ಕುಳಿತಿದ್ದ. ಆಗ ಬೀದಿಯಲ್ಲಿ ಒಬ್ಬ ಹೆಂಗಸು " ಖರ್ಜೂರ ಬೇಕೆ, ಖರ್ಜೂರ " ? ಎಂದು ಕೂಗಿಕೊಂಡು ಬಂದಳು. ಖರ್ಜೂರವೆಂಬ ಮಾತು ಕೇಳಿ ಚಿಪ್ಪಿಗನ ಬಾಯಲ್ಲಿ ನೀರೂರಿತು. ಅವನು ಕೂಡಲೇ ಜೇಬಿನಲ್ಲಿ ಹುಡುಕಿದ. ಆರುಕಾಸು ಸಿಕ್ಕಿತು. ಅವಳನ್ನು ಕರೆದು ಅಷ್ಟಕ್ಕೆ ಖರ್ಜೂರ ತೆಗೆದುಕೊಂಡ. ಅವನು ಕೂಗಿದ ಧೋರಣೆಯನ್ನು ಕೇಳಿದಾಗ ಸೇರುಗಟ್ಟಳೆ ಕೊಳ್ಳುವನೆಂಬ ಆಸೆಯಿಂದ ಬಂದಿದ್ದ ಆ ಹೆಂಗಸು ತೃಪ್ತಿಹೊಂದದೆ ಹೊರಟುಹೋದಳು.

ಚಿಪ್ಪಿಗ ಖರ್ಜೂರವನ್ನು ತನ್ನ ಹತ್ತಿರದಲ್ಲಿದ್ದ ಒಂದು ಹಲಗೆಯ ಮೇಲಿಟ್ಟು ಮತ್ತೆ ಹೊಲಿಯಲು ಆರಂಭಿಸಿದ. ಆ ಅಂಗಿಯ ಗುಂಡಿಗಳನ್ನೆಲ್ಲಾ ಹೊಲಿದ ಹೊರತು ಖರ್ಜೂರದ ಒಂದು ಚೂರನ್ನೂ ಮುಟ್ಟಬಾರದೆಂದು ಅವನ ನಿರ್ಧಾರ.

ಅವನು ಖರ್ಜೂರವನ್ನು ಮಣೆಯ ಮೇಲಿಟ್ಟು ಇತ್ತ ಮುಖ ತಿರುಗಿಸುವುದೇ ತಡ — ನೂರಾರು ನೊಣಗಳು ಝುಯ್ಯನೆ ಬಂದು ಅದಕ್ಕೆ ಮುತ್ತಿಗೆ ಹಾಕಿದವು.

" ಥೂ ! ನಿಮ್ಮ ಮನೆ ಹಾಳಾಗಲಿ ! " ಎನ್ನುತ್ತ ಚಿಪ್ಪಿಗ ಅವನ್ನು ಓಡಿಸಿದ. ಆದರೆ ನೊಣಗಳು ಇವನ ಕೂಗಾಟವನ್ನು ಕೇಳುವುವೆ ? ಮತ್ತೆ ಮತ್ತೆ ಬಂದೇ ಬಂದವು. ಅವನಿಗೆ ಸಿಟ್ಟೇರಿತು. ಪೆಟ್ಟಿಗೆಯ ಕೆಳಗೆ ಇಟ್ಟಿದ್ದ ಒಂದು ಹಳೆಯ ಅಂಗಿಯನ್ನು ತೆಗೆದುಕೊಂಡು ಅವುಗಳ ಕಡೆಗೆ ಬೀಸಿ ಹೊಡೆದ. ಆ ಏಟಿನ ಭರಕ್ಕೆ ಏಳು ನೊಣಗಳು ಕೂಡಲೆ ಸತ್ತುಬಿದ್ದವು.

ತಾನು ಕೊಂದ ನೊಣಗಳನ್ನು ನೋಡಿ ಅವನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಒಂದೇ ಏಟಿಗೆ ಏಳು ನೊಣಗಳನ್ನು ಕೊಲ್ಲುವುದೆಂದರೆ ಅವನದೇನು ಕಡಿಮೆ ಶೌರ್ಯವೆ? ಅವನಿಗೆ ತಾನು ಇನ್ನು ಆ ಸಣ್ಣ ಅಂಗಡಿಯಲ್ಲಿ ಕುಳಿತು ಒಂದೆರಡು ಕಾಸುಗಳ ಕೂಲಿಗಾಗಿ ದುಡಿಯಬಾರದು ಎನ್ನಿಸಿತು, ತನ್ನ ಪ್ರತಾಪ ಜಗತ್ತಿಗೆಲ್ಲಾ ಗೊತ್ತಾಗಬೇಕೆಂದು ತೋರಿತು. ಆದ್ದರಿಂದ ಅವನು ಒಂದು ಬಟ್ಟೆಯ ತುಂಡನ್ನು ತೆಗೆದುಕೊಂಡು ಅದನ್ನು ಸೊಂಟದ ಪಟ್ಟಿಯಂತೆ ಕತ್ತರಿಸಿದ. ಹಾಗೆಯೇ "ಒಂದೇ ಏಟಿಗೆ ಏಳು!" ಎಂಬ ಅಕ್ಷರಗಳನ್ನು ಕತ್ತರಿಸಿ ಅದರ ಮೇಲೆ ಹೊಲಿದ. ಹೆಮ್ಮೆಯಿಂದ ಅವನ ಹೃದಯ ಕುರಿಯ ಮರಿಯ ಬಾಲದಂತೆ ಮಿಡಿಯುತ್ತಿತ್ತು.

ಅನಂತರ ಚಿಪ್ಪಿಗ ಆ ಪಟ್ಟಿಯನ್ನು ಸೊಂಟಕ್ಕೆ ಸುತ್ತಿ ಪ್ರಪಂಚದಲ್ಲೆಲ್ಲಾ ಅಲೆಯಬೇಕೆಂದು ನಿಶ್ಚಯಿಸಿದ. ಹೊರಡುವುದಕ್ಕೆ ಮೊದಲು ಅವನು ತನ್ನ ಮನೆಯ ಮೂಲೆಗಳಲ್ಲಿ ಏನಾದರೂ ಸಿಕ್ಕೀತೆ ಎಂದು ಹುಡುಕಿದ. ತೆಗೆದುಕೊಂಡು ಹೋಗುವಂತಹುದು ಏನೂ ಸಿಕ್ಕಲಿಲ್ಲ. ಒಂದು ನಿಂಬೆಕಾಯಿಯ ಗಾತ್ರದ ಬೆಣ್ಣೆಯ ಮುದ್ದೆ ಮಾತ್ರ ಸಿಕ್ಕಿತು. ಅದನ್ನು ಒಂದು ದೊಡ್ಡ ಎಲೆಯಲ್ಲಿ ಸುತ್ತಿ ಜೇಬಿನಲ್ಲಿಟ್ಟುಕೊಂಡ.

ಅವನು ಮನೆಯಿಂದ ಹೊರಗೆ ಬಂದ ಒಡನೆಯೇ ಅಲ್ಲಿಗೆ ನಾಲ್ಕಾರು ಮಾರು ದೂರದಲ್ಲಿ ಪೊದರಿನಲ್ಲಿ ಸಿಕ್ಕಿಬಿದ್ದಿದ್ದ ಹಕ್ಕಿಯೊಂದು ಕಣ್ಣಿಗೆ ಬಿತ್ತು. ಅವನು ಅದನ್ನೂ ತೆಗೆದುಕೊಂಡು ಜೇಬಿಗೆ ಸೇರಿಸಿ, ಬಹಳ ಹುಮ್ಮಸ್ಸಿನಿಂದ ನಡೆಯುತ್ತ ಹೊರಟ. ಸಂತೋಷದ ಸಂಭ್ರಮದಲ್ಲಿ ಅವನಿಗೆ ಆಯಾಸವೇ ತೋರಲಿಲ್ಲ.

ಅವನು ನಡೆದು ಹೋದ ದಾರಿ ಎತ್ತರವಾದ ಒಂದು ಬೆಟ್ಟದ ತುದಿಯನ್ನು ಸೇರಿತು. ಅವನು ಅದರ ಶಿಖರವನ್ನು ಏರಿದಾಗ ಅಲ್ಲಿ ಒಬ್ಬ ಭೂತನಂತಿದ್ದ ರಾಕ್ಷಸ ಕುಳಿತಿದ್ದ. ಅವನು ಚಿಪ್ಪಿಗನ ಕಡೆಗೆ ಸ್ನೇಹಭಾವದಿಂದ ನೋಡಿದ.

ಚಿಪ್ಪಿಗ ರಾಕ್ಷಸನನ್ನು ಕಂಡು ಹೆದರಲಿಲ್ಲ. ನೇರವಾಗಿ ಅವನ ಬಳಿಗೆ ಹೋಗಿ "ನಮಸ್ಕಾರ, ಸ್ನೇಹಿತನೆ. ಇಲ್ಲಿ ಪ್ರಪಂಚವೆಲ್ಲಾ ನಿನ್ನ

ಮುಂದೆ ಕಾಣುತ್ತಿದೆ. ನೋಡುವುದಕ್ಕೆ ಬಹಳ ಚೆನ್ನಾಗಿದೆ. ನಾನೊಬ್ಬ ಪ್ರಯಾಣಿಕ. ಸಾಹಸ ಕಾರ್ಯಗಳನ್ನು ಹುಡುಕಿಕೊಂಡು ಹೋಗುತ್ತಿದ್ದೇನೆ. ನೀನೂ ನನ್ನೊಡನೆ ಬರುವೆಯಾ ?" ಎಂದ.

ರಾಕ್ಷಸ ಇವನ ಕಡೆಗೆ ಕೇವಲ ತಿರಸ್ಕಾರದಿಂದ ನೋಡಿ, "ಅಯ್ಯೋ ಜಂಭದ ಕೋಳಿ ! ತುಚ್ಛ ! ಹೋಗಾಚೆ !" ಎಂದು ಕೂಗಿದ.

"ಅವಸರಪಡಬೇಡ, ಸ್ವಲ್ಪ ತಾಳು" ಎನ್ನುತ್ತಾ, ಚಿಪ್ಪಿಗ ತನ್ನ ಅಂಗಿಯ ಗುಂಡಿಗಳನ್ನು ಬಿಚ್ಚಿ ನಡುಪಟ್ಟಿಯ ಮೇಲಿದ್ದ ಅಕ್ಷರಗಳನ್ನು ಅವನಿಗೆ ತೋರಿಸಿದ. "ನಿನಗೆ ಓದುವುದಕ್ಕೆ ಬಂದರೆ ಇಲ್ಲಿ ನೋಡು, ನಾನು ಎಂಥವನೆಂದು ಗೊತ್ತಾಗುತ್ತದೆ." ಎಂದ.

ರಾಕ್ಷಸ ಪಟ್ಟಿಯನ್ನು ನೋಡಿದ. "ಒಂದೇ ಏಟಿಗೆ ಏಳು !" ಎಂದು ಬರೆದಿತ್ತು. ಅವನು "ಒಂದೇ ಏಟಿಗೆ ಏಳು ಮಂದಿ ಮನುಷ್ಯರನ್ನು ಕೊಂದಿರಬಹುದು ಇವನು" ಎಂದು ಭಾವಿಸಿದ. ಅವನಿಗೆ ಚಿಪ್ಪಿಗನ ವಿಚಾರದಲ್ಲಿ ಗೌರವ ಹುಟ್ಟಿತು.

ಆಗ ರಾಕ್ಷಸ "ಹಾಗೇ ಆಗಲಿ. ನಾನೀಗ ನಿನ್ನನ್ನು ಪರೀಕ್ಷೆ ಮಾಡುತ್ತೇನೆ. ಇಲ್ಲಿ ನೋಡು, ನೀನು ಇದನ್ನು ಮಾಡಬಲ್ಲೆಯಾ ?" ಎಂದು ಅಲ್ಲಿ ಬಿದ್ದಿದ್ದ ಒಂದು ದೊಡ್ಡ ಕಲ್ಲನ್ನು ತೆಗೆದುಕೊಂಡು ಅದನ್ನು ಹಿಸುಕಿದ. ಅದರಿಂದ ಹತ್ತಾರು ಹನಿ ನೀರು ತೊಟ್ಟಿಟ್ಟಿತು.

ಅದನ್ನು ಕಂಡು ಚಿಪ್ಪಿಗ ಸ್ವಲ್ಪವೂ ಹಿಂಜರಿಯಲಿಲ್ಲ. "ಓ, ಅದೇನು ಘನವಾದ ಕೆಲಸವಯ್ಯಾ ? ನನಗೊಂದು ಆಟ ಅದು !' ಎನ್ನುತ್ತಾ ನೆಲದ ಮೇಲೆ ಬಿದ್ದಿದ್ದ ಒಂದು ಬೆಣಚುಕಲ್ಲನ್ನು ತೆಗೆದುಕೊಳ್ಳುವವನಂತೆ ನಟಿಸಿ, ತನ್ನ ಜೇಬಿನಲ್ಲಿದ್ದ ಬೆಣ್ಣೆಯ ಮುದ್ದೆಯನ್ನು ಹೊರಕ್ಕೆಳೆದು ಅದನ್ನು ಹಿಸುಕಿದ. ಬೆಣ್ಣೆ ಕರಣೆಕರಣೆಯಾಗಿ ಹೊರಟಿತು. "ಎಲ್ಲಿ. ನಿನ್ನ ಕೈಲಾದರೆ ಇದನ್ನು ಮಾಡಿ ನನ್ನನ್ನು ಸೋಲಿಸು" ಎಂದ.

ರಾಕ್ಷಸನಿಗೆ ಏನು ಹೇಳಬೇಕೆಂದು ಗೊತ್ತಾಗಲಿಲ್ಲ. ಆ ಬಡ ಚಿಪ್ಪಿಗನ ಶಕ್ತಿಯನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು.

ಅವನು ಇನ್ನೊಂದು ಕಲ್ಲನ್ನು ತೆಗೆದುಕೊಂಡು ಅದನ್ನು ಮೇಲಕ್ಕೆ ಎಸೆದ. ಅದು ಆಕಾಶದಲ್ಲಿ ಎಲ್ಲಿ ಹೋಯಿತೆಂಬುದೇ ತಿಳಿಯಲಿಲ್ಲ. ಅಷ್ಟು ಎತ್ತರಕ್ಕೆ ಹೋಗಿಬಿಟ್ಟಿತು.

ಚಿಪ್ಪಿಗ "ಚಿಂತೆಯಿಲ್ಲ! ಅದೇನೋ ಬುದ್ಧಿವಂತಿಕೆಯ ಕೆಲಸವೆ! ಆದರೆ ಆ ಕಲ್ಲು ಎಲ್ಲಾದರೂ ನೆಲಕ್ಕೆ ಬಿದ್ದೇ ಬೀಳುವುದು ಖಂಡಿತ. ನಾನು ಒಂದನ್ನು ಎಸೆಯುತ್ತೇನೆ, ನೋಡು. ಅದು ಮತ್ತೆ ಕೆಳಕ್ಕೆ ಬರುವುದೇ ಇಲ್ಲ" ಎಂದು ಮೂದಲಿಸಿ, ಜೇಬಿಗೆ ಕೈ ಹಾಕಿ ಅಲ್ಲಿದ್ದ ಹಕ್ಕಿಯನ್ನು ತೆಗೆದು ಅದನ್ನು ಗಾಳಿಯಲ್ಲಿ ತೂರಿಬಿಟ್ಟ.

ಬಂಧನದಿಂದ ಬಿಡುಗಡೆ ಹೊಂದಿದ ಆನಂದದಿಂದ ಹಕ್ಕಿ ಎರಡು ರೆಕ್ಕೆಗಳನ್ನೂ ಬಿಚ್ಚಿ ಹರಡಿ ಕ್ಷಣಮಾತ್ರದಲ್ಲಿ ಕಣ್ಣಿಗೆ ಕಾಣದಂತೆ ಹಾರಿಹೋಯಿತು. ಚಿಪ್ಪಿಗ "ಇದಕ್ಕೇನು ಹೇಳುವೆಯಯ್ಯಾ ಮಿತ್ರಾ?" ಎಂದ.

ರಾಕ್ಷಸ "ನೀನು ಕಲ್ಲು ಎಸೆಯುವುದರಲ್ಲೇನೋ ಬಹಳ ಜಾಣ. ಅದೇ ರೀತಿ ಭಾರವಾದ ಪದಾರ್ಥಗಳನ್ನು ಏಳೆಯುತ್ತೀಯೇನೋ ನೋಡೋಣ— ಎಂದು, ನೆಲದ ಮೇಲೆ ಬಿದ್ದಿದ್ದ ಒಂದು ದೊಡ್ಡ ಹುಣಸೆ ಮರದ ಹತ್ತಿರಕ್ಕೆ ಚಿಪ್ಪಿಗನನ್ನು ಕರೆದುಕೊಂಡು ಹೋದ. "ನಾನು ಬಹಳ ಧೈರ್ಯಶಾಲಿ, ಶಕ್ತಿವಂತ, ಎಂದು ಜಂಭ ಹೊಡೆಯುವೆಯಲ್ಲ! ಈ ಮರವನ್ನು ಕಾಡಿನಿಂದ ಹೊರಕ್ಕೆ ಸಾಗಿಸುವುದಕ್ಕೆ ನನಗೆ ಸಹಾಯ ಮಾಡು" ಎಂದ.

ಚಿಪ್ಪಿಗ "ಅಗತ್ಯವಾಗಿ ಆಗಲಿ. ನೀನು ಬುಡದ ಕಡೆ ಹೆಗಲು ಕೊಡು. ರೆಂಬೆಗಳೂ ಎಲೆಗಳೂ ಬಹಳ ಭಾರ. ಆ ಕಡೆ ನಾನೇ ಹೊರುತ್ತೇನೆ" ಎಂದ.

ರಾಕ್ಷಸ ಮರದ ಬುಡವನ್ನೆತ್ತಿ ತನ್ನ ಹೆಗಲ ಮೇಲೆ ಇಟ್ಟುಕೊಂಡ. ಉಪಾಯಗಾರನಾದ ಚಿಪ್ಪಿಗ ಹಿಂದುಗಡೆ ರೆಂಬೆಯೊಂದರ ಮೇಲೆ ಎಲೆಗಳ ನಡುವೆ ರಾಕ್ಷಸನ ಕಣ್ಣಿಗೆ ಕಾಣದಂತೆ ಕುಳಿತುಬಿಟ್ಟ. ಇದು ರಾಕ್ಷಸನಿಗೆ ಗೊತ್ತಾಗಲೇ ಇಲ್ಲ. ಅವನು ಮರವನ್ನೂ ಚಿಪ್ಪಿಗನನ್ನೂ ಒಟ್ಟಿಗೆ ಹೊರಬೇಕಾಯಿತು.

ಸಂತೋಷದಿಂದ ಒಳಗೊಳಗೇ ನಕ್ಕು ನಕ್ಕು ಚಿಪ್ಪಿಗನ ಹೊಟ್ಟೆ ಹುಣ್ಣಾಯಿತು. ಕಡೆಗೆ ಅವನು ತಡೆಯಲಾಗದೆ ಸಿಳ್ಳು ಹಾಕಿ ಹಾಡುವುದಕ್ಕೆ ಮೊದಲುಮಾಡಿದ. ನೋಡಿದವರಿಗೆ ಮರವನ್ನು ಹೊರುವುದು ಇವನಿಗೆ ಒಂದು ಆಟವೋ ಎನ್ನಿಸುತ್ತಿತ್ತು.

ರಾಕ್ಷಸನಿಗೆ ಬಹಳ ದೂರ ಹೋಗಲು ಆಗಲಿಲ್ಲ. ಅವನಿಗೆ ಭಾರದಿಂದ ಬಹಳ ಆಯಾಸವಾಯಿತು. ಕೊನೆಗೆ ಅವನು ಕೈಲಾಗದೆ ನಿಂತುಬಿಟ್ಟ "ಇನ್ನೊಂದು ಹೆಜ್ಜೆ ಕೂಡ ಮುಂದಕ್ಕೆ ಕಾಲಿಡಲು ನನಗೆ ಸಾಧ್ಯವಿಲ್ಲ. ಅಪ್ಪಪ್ಪ! ಏನು ಭಾರವಪ್ಪ! ಕೇಳುವುದಿಲ್ಲವೇನಯ್ಯಾ? ಮರವನ್ನು ಕೈ ಬಿಟ್ಟುಬಿಡುತ್ತೇನೆ!" ಎಂದು ಕೂಗಿದ.

ಈ ಕೂಗನ್ನು ಕೇಳಿದ ಕೂಡಲೆ ಚಿಪ್ಪಿಗ ಚಂಗನೆ ಕೆಳಕ್ಕೆ ಹಾರಿ, ಎರಡು ಕೈಗಳಿಂದಲೂ ಮರವನ್ನು ಹಿಡಿದುಕೊಂಡು, "ಇಂಥ ಮರವನ್ನು ಹೊರುವ ಶಕ್ತಿ ಇಲ್ಲದ ಮೇಲೆ ನೀನೆಂಥ ಶೂರನಯ್ಯಾ?" ಎಂದು ಗಟ್ಟಿಯಾಗಿ ಅರಚಿದ.

ಅವರು ಆ ಮರವನ್ನು ಅಲ್ಲೇ ಬಿಟ್ಟು ಮುಂದೆ ನಡೆದುಹೋದರು ದಾರಿಯಲ್ಲಿ ಒಂದು ಬೇಲದ ಮರ ಸಿಕ್ಕಿತು. ರಾಕ್ಷಸ ಅದರ ಅತ್ಯುನ್ನತವಾದ ರೆಂಬೆಯನ್ನು ಹಿಡಿದು ಬಗ್ಗಿಸಿ ಚಿಪ್ಪಿಗನ ಕೈಗೆ ಕೊಟ್ಟು ಬೇಕಾದಷ್ಟು ಹಣ್ಣು ತಿನ್ನಬಹುದೆಂದು ಹೇಳಿದ. ಪಾಪ, ಚಿಪ್ಪಿಗನಿಗೆ ಅಷ್ಟು ದೊಡ್ಡ ರೆಂಬೆಯನ್ನು ಭದ್ರವಾಗಿ ಎಳೆದು ಹಿಡಿದುಕೊಳ್ಳುವಷ್ಟು ತ್ರಾಣವಿರಲಿಲ್ಲ. ರೆಂಬೆ ಮೇಲಕ್ಕೆ ಹಾರಿತು. ಹಾಗೆಯೇ ತನ್ನ ಜೊತೆಯಲ್ಲಿ ಅವನನ್ನೂ ಹಾರಿಸಿಕೊಂಡು ಹೋಯಿತು. ಅವನು ಮೇಲಕ್ಕೆ ಹಾರಿ ಕೆಳಕ್ಕೆ ಬಿದ್ದ. ಆದರೆ ಅವನಿಗೆ ಅಪಾಯವೇನೂ ಆಗಲಿಲ್ಲ. "ಏನಯ್ಯಾ ಇಂಥ ಬಳ್ಳಿಯ ಕುಡಿಯನ್ನು ಹಿಡಿದುಕೊಳ್ಳುವುದಕ್ಕೆ ಆಗಲಿಲ್ಲವೆ ನಿನ್ನ ಕೈಯಲ್ಲಿ?" ಎಂದು ರಾಕ್ಷಸ ಅಪಹಾಸ್ಯ ಮಾಡಿದ.

ಚಿಪ್ಪಿಗ "ಶಕ್ತಿಯಿಲ್ಲದೆ ಏನಯ್ಯಾ? ಒಂದೇ ಏಟಿಗೆ ಏಳನ್ನು ಕೊಲ್ಲಬಲ್ಲವನಿಗೆ ಈ ರೆಂಬೆಯನ್ನು ಹಿಡಿದುಕೊಳ್ಳುವುದು ಕಷ್ಟವೆ? ಛೆ! ನಾನು ಹಾರಿದ್ದಕ್ಕೆ ಬೇರೆ ಕಾರಣವುಂಟು. ಹತ್ತಿರದಲ್ಲೇ ಬೇಟ

ಗಾರರು ಬಾಣ ಹೊಡೆಯುತ್ತಿದ್ದುದನ್ನು ಕಂಡೆ. ಅದಕ್ಕಾಗಿ ಹಾರಿದೆ. ಎಲ್ಲಿ, ನೀನು ಹಾರು, ನೋಡೋಣ. ನನಗೆ ನೀನು ಹಾರುವುದನ್ನು ನೊಡಬೇಕೆಂದು ಆಸೆ" ಎಂದ.

ರಾಕ್ಷಸ ಮರದ ಮೇಲೆ ಹಾರಲು ಪ್ರಯತ್ನಪಟ್ಟ. ಆದರೆ ಸಾಧ್ಯ ವಾಗಲಿಲ್ಲ. ಕಾಲುಗಳು ಮರದಲ್ಲಿ ಸಿಕ್ಕಿಕೊಂಡು ಅವನಿಗೆ ಬಹಳ ತೊಂದರೆಯಾಯಿತು ಹೀಗೆ ಈ ಪಂಥದಲ್ಲೂ ಚಿಪ್ಪಿಗನೇ ಗೆದ್ದ.

ಆಗ ರಾಕ್ಷಸ ಚಿಪ್ಪಿಗನನ್ನು ಕುರಿತು "ನೀನು ಬಹಳ ಬುದ್ಧಿವಂತ. ನಮ್ಮ ಗುಹೆಗೆ ಬಾ, ಹೋಗೋಣ. ಈ ರಾತ್ರಿ ಅಲ್ಲೇ ಮಲಗಿದ್ದು ಮುಂದಕ್ಕೆ ಹೋಗು" ಎಂದ.

ಅವನು ಹಿಂದೆ ಹೋಗಲು ಚಿಪ್ಪಿಗ ಸಿದ್ಧನಾಗೇ ಇದ್ದ. ಅವರು ಗುಹೆಯನ್ನು ಸೇರಿದಾಗ ಅಲ್ಲಿ ಇನ್ನಿಬ್ಬರು ರಾಕ್ಷಸರು ತಮ್ಮ ಕೈಗಳಲ್ಲಿ ಒಂದೊಂದು ದೊಡ್ಡ ಬೇಯಿಸಿದ ಕುರಿಯನ್ನು ಹಿಡಿದು ತಿನುತ್ತಾ ಕುಳಿತಿದ್ದರು.

ಚಿಪ್ಪಿಗ ಕುಳಿತುಕೊಂಡು ಎಲ್ಲವನ್ನೂ ನೋಡಿದ. "ಇದೆಲ್ಲಾ ನೋಡಬೇಕಾದ ನೋಟವೇ ಸರಿ. ಕಷ್ಟಪಟ್ಟರೂ ಚಿಂತೆಯಿಲ್ಲ!" ಎಂದು ಯೋಚಿಸಿದ.

ಅನಂತರ ರಾಕ್ಷಸ ಅವನಿಗೆ ಮಲಗಲು ಒಂದು ಹಾಸಿಗೆಯನ್ನು ತೋರಿಸಿದ. ಚಿಪ್ಪಿಗ ಅದರಲ್ಲಿ ಹೋಗಿ ಮಲಗಿದ. ಆದರೆ ಅದು ಬಹಳ ದೊಡ್ಡದಾಗಿತ್ತು. ಆದ್ದರಿಂದ ಅವನು ಕೂಡಲೆ ಮೇಲಕ್ಕೆದ್ದು ಒಂದು ಮೂಲೆಯಲ್ಲಿ ಹೋಗಿ ಮುದುರಿಕೊಂಡು ನಿದ್ರೆ ಮಾಡಿದ.

ನಡುರಾತ್ರಿಯ ಸಮಯ. ರಾಕ್ಷಸ ತನ್ನ ಅತಿಥಿ ನಿದ್ರೆಹೊಗುತ್ತಿದ್ದ ನೆಂದು ಭಾವಿಸಿ ಒಂದು ದೊಡ್ಡ ಕಬ್ಬಿಣದ ಕತ್ತಿಯನ್ನು ತೆಗೆದು ಕೊಂಡು ಬಂದು ಅದರಿಂದ ಹಾಸಿಗೆಗೆ ಬಲವಾದ ಏಟು ಕೊಟ್ಟ. ಆ ಪೆಟ್ಟು ಹಾಸಿಗೆಯನ್ನು ಎರಡುಭಾಗ ಮಾಡಿತು. "ಹಾ! ಆ ಚಿಟ್ಟಿಯನ್ನು ಕೊಂದಿದ್ದೇನೆ! ಇನ್ನು ಅವನ ಮೋಸದ ಕಾಟವಿಲ್ಲ!" ಎಂದುಕೊಂಡು ರಾಕ್ಷಸ ಹೊರಟುಹೋದ.

ಮಾರನೆಯ ದಿವಸ ಬೆಳಗ್ಗೆ ಆ ರಾಕ್ಷಸರು ಕಾಡಿನೊಳಕ್ಕೆ ಹೋಗಿ ಚಿಪ್ಪಿಗನನ್ನು ಸಂಪೂರ್ಣವಾಗಿ ಮರೆತುಬಿಟ್ಟಿದ್ದರು. ಅಷ್ಟುಹೊತ್ತಿಗೆ ಅವನು ನಗುತ್ತಾ ಕೇಕೆ ಹಾಕುತ್ತಾ ಮೊದಲಿದ್ದಂತೆಯೇ ಧೈರ್ಯದಿಂದ ಅವರ ಮುಂದೆ ಹೋದ.

ರಾಕ್ಷಸರು ಅವನು ಸತ್ತುಹೋಗಿದ್ದನೆಂದು ನಂಬಿದ್ದರು. ಮತ್ತೆ ಬದುಕಿ ಬಂದ ಅವನನ್ನು ಕಂಡೊಡನೆ ಅವನು ಒಂದೇ ಏಟಿಗೆ ಏಳನ್ನು ಸಂಹರಿಸಬಲ್ಲನೆಂಬ ವಿಷಯ ಅವರ ನೆನಪಿಗೆ ಬಂತು. ಅವನು ತಮ್ಮನ್ನೂ ಕೊಲ್ಲುವುದು ಖಂಡಿತವೆಂದು ಅವರಿಗೆ ಭಯವಾಯಿತು. ಆದುದರಿಂದ ಮೂವರೂ ಕಾಲಿಗೆ ಬುದ್ಧಿಹೇಳಿ ಬಹಳ ಬೇಗ ಕಣ್ಮರೆಯಾದರು.

ಅನಂತರ ಚಿಪ್ಪಿಗ ಮುಂದಕ್ಕೆ ಪ್ರಯಾಣಮಾಡಿ, ಬಹಳಕಾಲ ಅಲೆದಾಡಿ, ಕೊನೆಗೆ ಒಬ್ಬ ರಾಜನ ಅರಮನೆಯ ಹೆಬ್ಬಾಗಿಲಿಗೆ ಬಂದ. ಅವನಿಗೆ ಬಹಳ ದಣಿವಾಗಿತ್ತು. ಆದಕಾರಣ ಬಾಗಿಲ ಎರಡು ಕಡೆಯೂ ಬೆಳೆದಿದ್ದ ಮೃದುವಾದ ಹಸುರು ಹುಲ್ಲಿನ ಮೇಲೆ ಮಲಗಿದ. ಕೂಡಲೇ ಗಾಢವಾದ ನಿದ್ದೆಬಂತು.

ಅವನು ಅಲ್ಲಿ ಮಲಗಿದ್ದಾಗ ಆ ಬಾಗಿಲಿನ ಮೂಲಕ ಓಡಾಡುತ್ತಿದ್ದ ಜನರೆಲ್ಲಾ ಅವನ ಸೊಂಟದ ಮೇಲಿದ್ದ "ಒಂದೇ ಏಟಿಗೆ ಏಳು;" ಎಂಬ ಬರಹವನ್ನು ಓದಿದರು. ಅವರು ಅವನೊಬ್ಬ ಮಹಾವೀರನೆಂದು ಭಾವಿಸಿದರು. ಅವರಲ್ಲಿ ಒಬ್ಬ "ಯುದ್ಧವಿಲ್ಲ ಏನೂ ಇಲ್ಲ, ಇಂತಹ ಶೂರನಿಗೆ ಈ ಸಮಯದಲ್ಲಿ ಇಲ್ಲಿ ಏನು ಬೇಕಾಗಿದ್ದೀತು?" ಎಂದ.

ಅವರೆಲ್ಲರೂ ಹೋಗಿ ದೊರೆಗೆ ಹೇಳಿದರು, ಇಂತಹ ವೀರ ತಮ್ಮ ಊರಿನಲ್ಲಿದ್ದರೆ ಎಂತಹ ಅನುಕೂಲವಾಗುತ್ತದೆ ಎಂದು ಸೂಚಿಸಿದರು.

ದೊರೆ ಇವರ ಮಾತನ್ನು ಕೇಳಿ ತನ್ನ ಆಸ್ಥಾನದ ದೊಡ್ಡ ಮನುಷ್ಯನೊಬ್ಬನನ್ನು ಚಿಪ್ಪಿಗನ ಬಳಿಗೆ ಕಳುಹಿಸಿದ. "ಆ ವೀರ ನಿದ್ದೆ ಹೋಗಿ ಎದ್ದ ಒಡನೆಯೇ 'ನಮ್ಮ ದೊರೆ ನಿನ್ನನ್ನು ತನ್ನ ಬಳಿ

ಕೆಲಸಕ್ಕೆ ಸೇರಿಸಿಕೊಳ್ಳಬೇಕೆಂದು ಅಭಿಲಾಷೆಪಡುತ್ತಿದ್ದಾನೆ' ಎಂದು ಅವನಿಗೆ ತಿಳಿಸು" ಎಂದು ಅಪ್ಪಣೆ ಮಾಡಿದ.

ಚಿಪ್ಪಿಗ ಏಳುವವರೆಗೂ ರಾಜದೂತ ಅವನ ಸಮೀಪದಲ್ಲಿ ಕಾದು ನಿಂತಿದ್ದ. ಚಿಪ್ಪಿಗ ಎಚ್ಚೆತ್ತು ಕಣ್ಣುತೆರೆದು ಕೈಕಾಲು ಚಾಚಿದ. ಆಗ ಆಸ್ಥಾನಿಕ ರಾಜನ ಅಭಿಲಾಷೆಯನ್ನು ಅವನಿಗೆ ತಿಳಿಸಿದ.

ಚಿಪ್ಪಿಗ ಅದನ್ನು ಕೇಳಿ ಆನಂದದಿಂದ ನೆಗೆದು ಎದ್ದು ನಿಂತ. "ಹಾ! ನಾನು ಇಲ್ಲಿಗೆ ಬಂದುದೂ ಅದಕ್ಕಾಗಿಯೇ! ರಾಜನ ಬಳಿ ಕೆಲಸಕ್ಕೆ ಸೇರಬೇಕೆಂಬುದೇ ನನ್ನ ಅಪೇಕ್ಷೆ!" ಎಂದು ಹೇಳಿದ.

ಅನಂತರ ಅವನು ಅರಮನೆಗೆ ಹೋದ. ಅರಮನೆಯಲ್ಲಿ ರಾಜ ಅವನನ್ನು ಬಹಳ ಗೌರವದಿಂದ ಬರಮಾಡಿಕೊಂಡ. ಅವನ ಉಪಯೋಗಕ್ಕಾಗಿ ಸುಂದರವಾದ ಕೊಠಡಿಗಳನ್ನು ಸಿದ್ಧಪಡಿಸಿದ್ದರು.

ಆದರೆ ಆಸ್ಥಾನದಲ್ಲಿದ್ದ ಸೈನಿಕರಿಗೆ ಈ ಚಿಪ್ಪಿಗನನ್ನು ಕಂಡರೆ ಹೊಟ್ಟೆ ಉರಿಯುತ್ತಿತ್ತು. ಅವರು "ಇವನೆಲ್ಲಿ ಬಂದನಪ್ಪ ಅನಿಷ್ಟ!" ಎನ್ನುತ್ತಿದ್ದರು. "ನಾವೇನಾದರೂ ಇವನೊಡನೆ ಜಗಳವಾಡಿಬಿಟ್ಟರೆ ನಮ್ಮಗತಿ ಏನಾಗುವುದು? ಒಂದೇ ಏಟಿಗೆ ಏಳನ್ನು ಕೊಂದಿದ್ದಾನಂತೆ! ನಮ್ಮನ್ನು ಬಿಡುವನೆ?" ಎಂದು ಹೆದರಿದರು. ಆದ್ದರಿಂದ ಅವರೆಲ್ಲರೂ ತಮ್ಮ ತಮ್ಮಲ್ಲೇ ಒಂದು ಒಪ್ಪಂದಕ್ಕೆ ಬಂದು, ಎಲ್ಲರೂ ಒಟ್ಟಾಗಿ ದೊರೆಯ ಬಳಿಗೆ ಹೋಗಿ ತಮ್ಮ ಕೆಲಸಗಳಿಗೆ ರಾಜೀನಾಮೆ ಕೊಟ್ಟರು. "ಒಂದೇ ಏಟಿಗೆ ಏಳನ್ನು ಸಂಹರಿಸಬಲ್ಲವನ ಸಹವಾಸ ನಮಗೆ ಖಂಡಿತ ಬೇಡ" ಎಂದುಬಿಟ್ಟರು.

ಈ ಹೊಸಬನ ನಿಮಿತ್ತವಾಗಿ ಹಳೆಯ ಸ್ನೇಹಿತರನ್ನೆಲ್ಲಾ ಕಳೆದು ಕೊಳ್ಳುವುದು ರಾಜನಿಗೆ ರುಚಿಸಲಿಲ್ಲ. ಅವನೂ "ಈ ಹಾಳಾದವನು ಬಾರದೆ ಇದ್ದಿದ್ದರೆ ಚೆನ್ನಾಗಿತ್ತು" ಎಂದುಕೊಂಡ.

ಆದರೆ ಇವನನ್ನು ಕಳುಹಿಸುವುದು ಹೇಗೆಂದು ಯಾರಿಗೂ ತೋಚಲಿಲ್ಲ. ಯಾರಾದರೂ ಅವನೊಡನೆ ಹೆಚ್ಚು ಮಾತಾಡಿದರೆ ಅವನು ತಮ್ಮನ್ನು ಒಂದೇ ಏಟಿಗೆ ಕೊಂದು ಬಿಡಬಹುದೆಂಬ ಹೆದರಿಕೆ ಬೇರೆ ಅವರನ್ನು ಪೀಡಿಸುತ್ತಿತ್ತು. ರಾಜ ಬಹಳಹೊತ್ತು ಆಳವಾಗಿ

ಆಲೋಚಿಸಿದ. ಕೊನೆಗೆ ಒಂದು ಉಪಾಯ ಹೊಳೆಯಿತು. ಅವನು ಚಿಪ್ಪಿಗನನ್ನು ಕರೆಯ ಕಳುಹಿಸಿ, "ನೀನು ದೊಡ್ಡ ವೀರ. ಯಾವ ಕೆಲಸವನ್ನಾದರೂ ಮಾಡಬಲ್ಲೆ. ನಿನ್ನಿಂದ ನನಗೊಂದು ಸಹಾಯ ವಾಗ ಬೇಕಾಗಿದೆ" ಎಂದ.

ಚಿಪ್ಪಿಗ "ಏನು? ಅಪ್ಪಣೆಯಾಗಲಿ" ಎಂದ.

ರಾಜ "ಇಲ್ಲಿಂದ ಸ್ವಲ್ಪ ದೂರದಲ್ಲೇ ಒಂದು ಅರಣ್ಯವಿದೆ. ಅದ ರಲ್ಲಿ ಇಬ್ಬರು ರಾಕ್ಷಸರು ವಾಸವಾಗಿದ್ದಾರೆ. ಅವರು ನಮ್ಮ ದೇಶದ ಜನಗಳ ಆಸ್ತಿಪಾಸ್ತಿಗಳನ್ನೆಲ್ಲಾ ಕೊಳ್ಳೇಹೊಡೆದು ಅನೇಕರನ್ನು ಕೊಂದು ಬಹಳ ತೊಂದರೆ ಕೊಡುತ್ತಿದ್ದಾರೆ. ಅವರಿರುವ ಕಾಡಿನ ದಿಕ್ಕಿನಲ್ಲಿ ನಡೆದು ಹೋಗಲು ಕೂಡ ಜನ ಹೆದರುತ್ತಾರೆ. ಈಗ ನೀನು ಈ ರಾಕ್ಷಸರಿಬ್ಬರನ್ನೂ ಸೋಲಿಸಿ ನಾಶಮಾಡಿದರೆ ನಾನು ನಿನಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡುತ್ತೇನೆ; ಮತ್ತು ನನ್ನ ರಾಜ್ಯ ದಲ್ಲಿ ಅರ್ಧವನ್ನು ಬಳುವಳಿಯಾಗಿ ಕೊಡುತ್ತೇನೆ. ನೀನು ಈ ಕೆಲಸ ಮಾಡಲು ಒಪ್ಪಿದರೆ ನಿನಗೆ ಸಹಾಯ ಮಾಡಲು ನೂರು ಜನ ಸೈನಿಕರನ್ನು ಕಳುಹಿಸಿ ಕೊಡುತ್ತೇನೆ" ಎಂದ. ಆ ರಾಕ್ಷಸರ ಕೈಯಿಂದ ಚಿಪ್ಪಿಗ ಹತನಾಗುವುದು ಖಂಡಿತ ಎಂದು ರಾಜ ನಂಬಿದ್ದ.

ಚಿಪ್ಪಿಗ "ಬಹಳ ಒಳ್ಳೆಯದು. ಇಂಥ ಪ್ರತಿಫಲ ದೊರೆಯುವ ಹಾಗಿದ್ದರೆ ಯಾರು ತಾನೇ ಒಪ್ಪುವುದಿಲ್ಲ? ಇಷ್ಟು ಸೊಗಸಾದ ಅವ ಕಾಶಗಳು ದಿನವೂ ಸಿಕ್ಕುತ್ತವೆಯೆ? ನನ್ನಂಥವನಿಗೆ ಬೇಕಾದುದೇ ಇದು!" ಎಂದು ಯೋಚಿಸಿ, ದೊರೆಯ ಕಡೆ ತಿರುಗಿ "ಪ್ರಭೂ, ನಾನು ರಾಕ್ಷಸರನ್ನು ಸಂಹರಿಸುತ್ತೇನೆ. ಆದರೆ ನೀವು ಹೇಳಿದ ನೂರು ಜನ ಸೈನಿಕರಿಂದ ನನಗೆ ಏನೂ ಪ್ರಯೋಜನವಿಲ್ಲ. ಒಂದೇ ಏಟಿಗೆ ಏಳನ್ನು ಕೊಂದ ನಾನು ಇಬ್ಬರಿಗೆ ಹೆದರುವೆನೆ?" ಎಂದು ಹೇಳಿದ.

ಅನಂತರ ಚಿಪ್ಪಿಗ ರಾಕ್ಷಸರಿದ್ದ ಕಾದಿಗೆ ಹೊರಟ. ರಾಜನ ಆಜ್ಞೆಯ ಪ್ರಕಾರ ನೂರು ಮಂದಿ ಸೈನಿಕರು ಅವನನ್ನು ಹಿಂಬಾಲಿಸಿ ದರು. ಅವರು ಕಾಡಿನ ಹೊರಭಾಗವನ್ನು ಸೇರಿದಾಗ ಚಿಪ್ಪಿಗ ಸೈನಿಕ ರಿಗೆ "ನಾನು ಹಿಂದಿರುಗಿ ಬರುವವರೆಗೂ ಇಲ್ಲೇ ಇರಿ. ನಾನೊಬ್ಬನೇ

ಹೋಗಿ ರಾಕ್ಷಸನನ್ನು ನೋಡಿಕೊಳ್ಳುತ್ತೇನೆ" ಎಂದು ಹೇಳಿ, ಅರಣ್ಯ ದೊಳಕ್ಕೆ ನೆಗೆದು, ಅಲ್ಲಲ್ಲಿ ನಿಂತು, ಎಚ್ಚರಿಕೆಯಿಂದ ಸುತ್ತಲೂ ನೋಡಿದ.

ಸ್ವಲ್ಪಹೊತ್ತಿನ ಮೇಲೆ ಅವನು ಒಂದು ಮರದ ಕೆಳಗೆ ಗಾಢ ನಿದ್ದೆಯಲ್ಲಿ ಮಲಗಿದ್ದ ಇಬ್ಬರು ರಾಕ್ಷಸರನ್ನು ಕಂಡ. ಅವರು ಗಟ್ಟಿ ಯಾಗಿ ಗೊರಕೆ ಹಾಕುತ್ತಿದ್ದರು. ಅದರ ರಭಸಕ್ಕೆ ಅವರ ಮೇಲಿದ್ದ ಮರದ ಕೊಂಬೆಗಳು ಅಲ್ಲಾಡುತ್ತಿದ್ದವು.

ಚಿಪ್ಪಿಗ ಸುಮ್ಮನೆ ಸೋಮಾರಿಯಂತೆ ನಿಂತುಬಿಡಲಿಲ್ಲ. ಓಡಿ ಹೋಗಿ ತನ್ನ ಜೇಬುಗಳ ತುಂಬಾ ಕಲ್ಲುಗಳನ್ನು ತುಂಬಿಕೊಂಡು ಬಂದು, ಆ ಮರವನ್ನು ಹತ್ತಿ ರಾಕ್ಷಸರ ಮೇಲುಗಡೆ ಇದ್ದ ರೆಂಬೆಯೊಂ ದಕ್ಕೆ ಹೋಗಿ ಅಲ್ಲಿ ಕುಳಿತುಕೊಂಡ. ಅನಂತರ ಕೆಳಗೆ ಮಲಗಿದ್ದ ಒಬ್ಬ ರಾಕ್ಷಸನ ಎದೆಗೆ ಸರಿಯಾಗಿ ಗುರಿಯಿಟ್ಟು ಒಂದು ಕಲ್ಲನ್ನು ಬೀರಿದ.

ಆ ರಾಕ್ಷಸ ಎಚ್ಚತ್ತು ತನ್ನ ಜೊತೆಯಲ್ಲಿ ಮಲಗಿದ್ದವನನ್ನು ಒರ ಟಾಗಿ ನೂಕಿ "ನನ್ನನ್ನೇಕೋ ಹೊಡೆದೆ?" ಎಂದು ಅಬ್ಬರಿಸಿದ.

ಇನ್ನೊಬ್ಬ "ನಿನಗೆಲ್ಲೋ ಕನಸು! ನಾನು ನಿನನ್ನು ಮುಟ್ಟಲೇ ಇಲ್ಲ!" ಎಂದ. ಬಹಳ ಬೇಗ ಮತ್ತೆ ಇಬ್ಬರೂ ನಿದ್ದೆ ಹೋಗಿಬಿಟ್ಟರು.

ಆಗ ಚಿಪ್ಪಿಗ ಒಂದು ಭಾರವಾದ ಕಲ್ಲನ್ನು ಕೈಗೆ ತೆಗೆದುಕೊಂಡು ಎರಡನೆಯ ರಾಕ್ಷಸನ ಮೇಲೆ ಎಸೆದ. ಅವನು ಕೋಪದಿಂದ ಎದ್ದು ಪಕ್ಕದಲ್ಲಿ ಬಿದ್ದುಕೊಂಡಿದ್ದ ಮೊದಲನೆಯ ರಾಕ್ಷಸನನ್ನು ಗುದ್ದಿ "ನೀನೇಕೋ ಈಗ ನನ್ನನ್ನು ಹೊಡೆದದ್ದು?" ಎಂದು ಕೂಗಿದ.

ಮೊದಲನೆಯ ರಾಕ್ಷಸ "ನಾನು ನಿನ್ನ ತಂಟೆಗೇ ಬರಲಿಲ್ಲ" ಎಂದು ಗೊಣಗಿದ.

ಅವರಿಬ್ಬರಿಗೂ ನಿದ್ದೆ ಕೆಟ್ಟುದರಿಂದ ಸಿಟ್ಟು ಹೆಚ್ಚಿತು. ಇಬ್ಬರೂ ಸ್ವಲ್ಪಹೊತ್ತು ಒಬ್ಬರನ್ನೊಬ್ಬರು ಬಯ್ದಾಡಿದರು. ಕೊನೆಗೆ ಆಯಾಸ ವಾಗಲು ಇಬ್ಬರೂ ಮತ್ತೆ ಮಲಗಿದರು.

ಅವರು ಕಣ್ಣು ಮುಚ್ಚಿದ್ದೇ ತಡ—ಚಿಪ್ಪಿಗ ಮತ್ತೊಮ್ಮೆ ತನ್ನ ಆಟಕ್ಕೆ ಮೊದಲಿಟ್ಟ. ಈ ಸಾರಿ ಅವನು ತನ್ನ ಬಳಿ ಇದ್ದ ಅತ್ಯಂತ ದೊಡ್ಡ ಕಲ್ಲನ್ನು ತೆಗೆದುಕೊಂಡು ಮೊದಲನೆಯ ರಾಕ್ಷಸನ ಎದೆಯ ಮೇಲೆ ನೇರವಾಗಿ ಬೀಳುವಂತೆ ಎಸೆದ.

"ಥೂ! ಕತ್ತೆ!" ಎನ್ನುತ್ತಾ ಆ ರಾಕ್ಷಸ ತನ್ನ ಪಕ್ಕದಲ್ಲಿದ್ದವನನ್ನು ಮರಕ್ಕೆ ತಗಲುವಂತೆ ಒದ್ದ. ಮರ ಅಲ್ಲಾಡಿಹೋಯಿತು!

ಎರಡನೆಯವನು ಇವನ ಹೊಡೆತವನ್ನು ಹಿಂತಿರುಗಿಕೊಟ್ಟು ಋಣ ತೀರಿಸಿಕೊಂಡ. ಇಬ್ಬರಿಗೂ ಕಾದಾಟ ಆರಂಭವಾಯಿತು, ಇಬ್ಬರೂ ಕೋಪದ ಭರದಲ್ಲಿ ಭಯಂಕರವಾಗಿ ಹೊಡೆದಾಡಿದರು. ಮರಗಳನ್ನು ಬುಡಸಮೇತ ಕಿತ್ತು ಆಯುಧಗಳಾಗಿ ಉಪಯೋಗಿಸಿದರು. ಅವರ ಅಡಿಗಳ ತುಳಿತದಿಂದ ಭೂಮಿ ನಡುಗಿತು. ಕೊನೆಗೆ ಇಬ್ಬರೂ ಸತ್ತುಬಿದ್ದರು. ಆಗ ಹೊಡೆದಾಟ ನಿಂತಿತು.

ಚಿಪ್ಪಿಗ ಚಂಗನೆ ನೆಲಕ್ಕೆ ಧುಮುಕಿ, "ನನ್ನ ಅದೃಷ್ಟ! ಅವರು ನಾನು ಕುಳಿತಿದ್ದ ಮರವನ್ನು ಕೀಳಲಿಲ್ಲ! ಇಲ್ಲದಿದ್ದರೆ ನಾನು ಅಳಿಲಿನಂತೆ ಬೇರೆ ಮರಕ್ಕೆ ಹಾರಬೇಕಾಗುತ್ತಿತ್ತು! ಸದ್ಯ ಬದುಕಿದೆ!" ಎಂದು ಕೂಗಿದ.

ತರುವಾಯ ಅವನು ತನ್ನ ಕತ್ತಿಯನ್ನೆಳೆದು ಅದರಿಂದ ರಾಕ್ಷಸರ ಎದೆಗಳಲ್ಲಿ ನಾಲ್ಕಾರುಕಡೆ ಗಾಯಮಾಡಿ, ಕಾಡಿನಿಂದ ಹೊರಬಿದ್ದು ರಾಜನ ಸೈನಿಕರಿದ್ದ ಸ್ಥಳಕ್ಕೆ ಹೋದ. "ಕೆಲಸ ಮುಗಿಯಿತು! ನಾನು ಅವರಿಬ್ಬರನ್ನೂ ಕೊನೆಗಾಣಿಸಿದೆ. ಅದೇನೂ ಸುಲಭವಾಗಿರಲಿಲ್ಲ. ಅವರು ಕಾದಾಡುವಾಗ ಮರಗಳನ್ನೇ ಕಿತ್ತು ಆಯುಧಗಳಂತೆ ಉಪಯೋಗಿಸಿದರು. ಆದರೇನು? ಒಂದೇ ಏಟಿಗೆ ಏಳನ್ನು ಕೊಂದಿರುವ ನನ್ನ ಮುಂದೆ ಅದೆಲ್ಲಾ ಪ್ರಯೋಜನಕ್ಕೆ ಬಾರದೇಹೋಯಿತು" ಎಂದು ಬರುಡೆ ಬಿಟ್ಟ.

ಅವರಲ್ಲಿ ಒಬ್ಬ "ನಿನಗೆ ಏನೂ ಗಾಯವಾಗಿಲ್ಲವೆ?" ಎಂದು ಕೇಳಿದ.

ಚಿಪ್ಪಿಗ "ಎಲ್ಲಾದರೂ ಉಂಟೆ! ನನ್ನ ತಲೆಯ ಒಂದು ಕೂದಲು ಕೂಡ ಅಲ್ಲಾಡಿಲ್ಲ!" ಎಂದು ಉತ್ತರಕೊಟ್ಟ.

ಸೈನಿಕರು ಅವನನ್ನು ನಂಬಲಿಲ್ಲ. ಆದ್ದರಿಂದ ಅವನು ರಾಕ್ಷಸರು ರಕ್ತಮಯರಾಗಿ ಬಿದ್ದಿದ್ದ ಸ್ಥಳಕ್ಕೆ ಅವರನ್ನು ಕರೆದುಕೊಂಡು ಹೋಗಿ ತೋರಿಸಿದ. ಸುತ್ತಲೂ ರಾಕ್ಷಸರೇ ಕಿತ್ತುಹಾಕಿದ್ದ ಮರಗಳು ಬಿದ್ದಿದ್ದವು.

ಚಿಪ್ಪಿಗ ಆಸ್ಥಾನಕ್ಕೆ ಹಿಂದಿರುಗಿ ರಾಜನ ಬಳಿಗೆ ಹೋಗಿ ತನಗೆ ಅವನು ಹೇಳಿದ್ದ ಬಹುಮಾನ ಕೊಡಬೇಕೆಂದು ಕೇಳಿದ. ರಾಜನಿಗೆ ಅದು ಇಷ್ಟವಿರಲಿಲ್ಲ. ಈ ಚಿಪ್ಪಿಗನನ್ನು ಯಾವುದಾದರೂ ನೆಪದಿಂದ ಹೊರಕ್ಕೆ ಸಾಗಿಸಬೇಕೆಂಬುದೇ ಅವನ ಅಭಿಲಾಷೆಯಾಗಿತ್ತು. ಆದ್ದರಿಂದ ಅವನು "ನಾನು ನಿನಗೆ ನನ್ನ ರಾಜ್ಯದಲ್ಲಿ ಅರ್ಧವನ್ನು ಕೊಡುವುದಕ್ಕೆ ಮೊದಲು ನೀನು ವೀರನಿಗೆ ತಕ್ಕ ಇನ್ನೊಂದು ಕೆಲಸವನ್ನು ಮಾಡಬೇಕು. ನನ್ನ ಅರಣ್ಯದಲ್ಲಿ ಭಯಂಕರವಾದ ಒಂದು ಕಾಡುಕೋಣವಿದೆ. ಅದು ಹೋದಕಡೆಯೆಲ್ಲಾ ಏನಿದ್ದರೂ ಹಾಳಾಗುತ್ತಿದೆ. ನೀನು ಅದನ್ನು ಕೊಲ್ಲಬೇಕು" ಎಂದು ಹೇಳಿದ.

ಚಿಪ್ಪಿಗ "ಇಬ್ಬರು ರಾಕ್ಷಸರನ್ನು ಕೊಂದಮೇಲೆ ಒಂದು ಕಾಡುಕೋಣವನ್ನು ಕೊಲ್ಲುವುದು ಏನು ದೊಡ್ಡ ಸಾಹಸ? ಒಂದೇ ಏಟಿಗೆ ಏಳು ಹೊಡೆಯುವುದು ನನ್ನ ಕೆಲಸ" ಎಂದು ಒಂದು ಹಗ್ಗವನ್ನೂ ಒಂದು ಮಚ್ಚನ್ನೂ ತೆಗೆದುಕೊಂಡು ಮತ್ತೆ ಅರಣ್ಯಕ್ಕೆ ಹೊರಟ. ಈಗಲೂ ಸಹ ತನ್ನ ಜೊತೆಯಲ್ಲಿ ಬಂದಿದ್ದವರಿಗೆ ಹೊರಗಡೆಯೇ ನಿಲ್ಲುವಂತೆ ಹೇಳಿದ.

ಅವನು ಬಹಳ ಕಾಯಬೇಕಾದ ಅಗತ್ಯವೇ ಇರಲಿಲ್ಲ. ಕಾಡುಕೋಣ ಸ್ವಲ್ಪ ಹೊತ್ತಿನಲ್ಲೇ ಅಲ್ಲಿಗೆ ಬಂದು ಚಿಪ್ಪಿಗನನ್ನು ನೋಡಿದ ಒಡನೆಯೇ ಅವನನ್ನು ನೆಲಕ್ಕೆ ಕೆಡವಲು ಮುಂದಕ್ಕೆ ನೆಗೆಯಿತು.

ಅವನು "ಮೆಲ್ಲಗಣ್ಣಾ! ಮೆಲ್ಲಗೆ! ಆ ಕೆಲಸ ಅಷ್ಟು ಸುಲಭವಾಗಿ ಆಗುವುದಿಲ್ಲ! ಎಂದ.

ಅನಂತರ ಚಿಪ್ಪಿಗ ಆ ಪ್ರಾಣಿ ಬಿಗುವಿನಿಂದ ಸೆಟೆದುಕೊಂಡು ತನ್ನ ಹತ್ತಿರಕ್ಕೆ ಬರುವವರೆಗೂ ನಿಂತಿದ್ದ. ಅದು ಅವನ ಕಡೆಗೆ ಹಾರಿತೋ ಇಲ್ಲವೋ—ಸಮಯ ನೋಡಿ ಅವನು ಚಂಗನೆ ಒಂದು ಮರದ ಹಿಂದಕ್ಕೆ ನುಸುಳಿ ಬಚ್ಚಿಟ್ಟುಕೊಂಡ. ಕಾಡುಕೋಣ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಆ ಮರದ ಮೇಲೆ ನುಗ್ಗಿತು. ಅದರ ಕೊಂಬುಗಳೆರಡೂ ಮರದಲ್ಲಿ ಸಿಕ್ಕಿಕೊಂಡವು. ಅವನ್ನು ಹಿಂದಕ್ಕೆ ಕೀಳಲು ಅದಕ್ಕೆ ಅಸಾಧ್ಯವಾಯಿತು. ಅದು ಅಲ್ಲೇ ಬಂದಿಯಾಗಿ ನಿಂತುಬಿಟ್ಟಿತು.

"ನನ್ನ ಹಕ್ಕಿ ಸಿಕ್ಕಿತು" ಎಂದು ಚಿಪ್ಪಿಗ ಮರದ ಹಿಂದಿನಿಂದ ಮುಂದೆ ಬಂದ. ಮೊದಲು ಅದರ ಕತ್ತಿಗೆ ಹಗ್ಗವನ್ನು ಕಟ್ಟಿ, ಮಚ್ಚಿನಿಂದ ಅದರ ಕೊಂಬುಗಳನ್ನು ಕತ್ತರಿಸಿದ. ಅನಂತರ ಅದನ್ನು ದೊರೆಯ ಎದುರಿಗೆ ಹಿಡಿದುಕೊಂಡು ಹೋದ.

ಈಗಲೂ ತಾನು ಮಾತು ಕೊಟ್ಟಿದ್ದಂತೆ ನಡೆದುಕೊಳ್ಳಲು ರಾಜನಿಗೆ ಇಷ್ಟವಿರಲಿಲ್ಲ. ಅವನು ಚಿಪ್ಪಿಗ ಇನ್ನೊಂದು ಮಹತ್ಕಾರ್ಯವನ್ನು ಮಾಡಬೇಕೆಂದು ಅಪೇಕ್ಷಿಸಿದ. ಮದುವೆಯಾಗುವ ಮುಂಚೆ, ಅರಣ್ಯದಲ್ಲಿ ಬಹಳ ತಂಟೆ ಮಾಡುತ್ತಿದ್ದ ಕಾಡುಹಂದಿಯೊಂದನ್ನು ಅವನು ಸಂಹರಿಸಬೇಕೆಂದೂ, ರಾಜನ ಬೇಟೆಗಾರರು ಅವನಿಗೆ ಸಹಾಯ ಮಾಡುವರೆಂದೂ ಅಪ್ಪಣೆಯಾಯಿತು.

"ಓಹೋ! ಆ ಕೆಲಸ ನನಗೆ ಮಕ್ಕಳಾಟದಂತೆ!" ಎಂದು ಚಿಪ್ಪಿಗ ಕೂಡಲೆ ಕಾಡಿಗೆ ಹೊರಟ. ಈಸಾರಿಯೂ ಅವನು ಬೇಟೆಗಾರರನ್ನು ಹೊರಗೆ ಬಿಟ್ಟುಹೋದ. ಇದರಿಂದ ಅವರಿಗೆ ಬಹಳ ಸಂತೋಷವಾಯಿತು. ಏಕೆಂದರೆ ಅವರು ಹಿಂದೆ ಅನೇಕ ವೇಳೆ ಆ ಹಂದಿಯನ್ನು ಬೇಟೆಯಾಡಲು ಹೋಗಿ ಪೆಟ್ಟು ತಿಂದಿದ್ದರು. ಈಗ ಮತ್ತೆ ಈ ಚಿಪ್ಪಿಗನ ಸಾಹಸ ಕಾರ್ಯದಲ್ಲಿ ಭಾಗವಹಿಸಲು ಅವರಿಗೆ ಇಷ್ಟವಿರಲಿಲ್ಲ.

ಕಾಡುಹಂದಿ ಚಿಪ್ಪಿಗನನ್ನು ಕಂಡೊಡನೆಯೇ ಅವನ ಮೇಲೆ ಹಾರಬೇಕೆಂದು ಓಡಿಬಂತು. ಅದರ ಕೋರೆಯ ಹಲ್ಲು ಹೊಳೆಯು

ತ್ತಿದ್ದವು ; ಬಾಯಿಂದ ನೊರೆ ಉದುರುತ್ತಿತ್ತು. ಆದರೆ ಚಿಪ್ಪಿಗ ಇಂಥ ಪ್ರಾಣಿಗೆಲ್ಲಾ ಸಿಕ್ಕಿಬೀಳುವಂಥ ಹೆದ್ದನಲ್ಲ. ಕಾಡಿನಲ್ಲಿ ಯಾವ ಕಾಲದ್ದೋ ಒಂದು ಹಳೆಯ ಮುರುಕಲು ಮನೆಯಿತ್ತು. ಅದರ ಹುಲ್ಲಿನ ಛಾವಣಿ ಕುಸಿದು ಬಿದ್ದಿತ್ತು. ಅವನು ಆ ಮನೆಯೊಳಕ್ಕೆ ಒಂದು ಕಡೆಯಿಂದ ಬಾಗಿಲ ಮೂಲಕ ನುಗ್ಗಿ ಮೇಲೆ ಛಾವಣಿ ಕುಸಿದಕಡೆ ಆಗಿದ್ದ ದೊಡ್ಡ ಸಂದಿನಲ್ಲಿ ತೂರಿ ಹೊರಕ್ಕೆ ಬಂದು ಬಿಟ್ಟ. ಹಂದಿಯೂ ಅವನ ಹಿಂದೆಯೇ ಹಾರಿತು. ಆದರೆ ಅದು ಮನೆಯನ್ನು ಬಾಗಿಲ ಮೂಲಕ ಪ್ರವೇಶಿಸಿದ ಕೂಡಲೆ ಚಿಪ್ಪಿಗ ಹಿಂದಿನಿಂದ ಓಡಿಬಂದು ಬಾಗಿಲನ್ನು ಎಳೆದು ಬದ್ರವಾಗಿ ಮುಚ್ಚಿಬಿಟ್ಟ. ಹಂದಿ ಒಳಗೇ ಸೆರೆಯಾಯಿತು. ಛಾವಣಿಯ ಸಂದಿನಿಂದ ಹಾರಿಬರುವಷ್ಟು ಬುದ್ಧಿ ಅದಕ್ಕೆ ಇರಲಿಲ್ಲ. ಅದೂ ಅಲ್ಲದೆ ಮೈ ಭಾರ ಬಹಳವಾಗಿದ್ದುದರಿಂದ ಅಷ್ಟುಮೇಲಕ್ಕೆ ಹಾರುವುದೂ ಅದಕ್ಕೆ ಸಾಧ್ಯವಿರಲಿಲ್ಲ.

ಚಿಪ್ಪಿಗ ಬೇಟೆಗಾರರನ್ನೆಲ್ಲಾ ಕರೆದು ಬಂದಿಯಾಗಿದ್ದ ಹಂದಿಯನ್ನು ಅವರಿಗೆ ತೋರಿಸಿದ. ಅನಂತರ ಅವನು ಆ ಹಂದಿಯನ್ನು ರಾಜನಿಗೆ ಕಾಣಿಕೆಯಾಗಿ ಒಪ್ಪಿಸಿದ. ಈಸಾರಿ ರಾಜ ತನಗೆ ಮನಸ್ಸಿಲ್ಲದಿದ್ದರೂ ತನ್ನ ಮಾತಿನ ಪ್ರಕಾರ ಈ ವೀರನಿಗೆ ಮಗಳನ್ನೂ ಅರ್ಧ ರಾಜ್ಯವನ್ನೂ ಕೊಡಲೇಬೇಕಾಯಿತು.

ಇವನು ಚಿಪ್ಪಿಗನೆಂದು ರಾಜನಿಗೆ ಗೊತ್ತಿರಲಿಲ್ಲ. ಹಾಗೆ ಗೊತ್ತಿದ್ದರೆ ಅವನಿಗೆ ಬಹಳ ವ್ಯಥೆಯಾಗುತ್ತಿತ್ತು.

ಮದುವೆ ಬಹಳ ವೈಭವದಿಂದ ನಡೆಯಿತು. ಆದರೆ ಯಾರ ಮುಖದಲ್ಲೂ ಸಂತೋಷವಿರಲಿಲ್ಲ. ಅಂತೂ ಚಿಪ್ಪಿಗ ದೊರೆಯಾದ.

ಸ್ವಲ್ಪ ಕಾಲವಾದ ಮೇಲೆ ಒಂದು ದಿನ ರಾಜಕುಮಾರಿ ತನ್ನ ಗಂಡ ನಿದ್ದೆಯಲ್ಲಿ ಕನವರಿಸುವುದನ್ನು ಕೇಳಿದಳು. ಅವನು "ಹುಡುಗನೇ ಕೆಲಸಮಾಡು. ಆ ಅಂಗಿಯನ್ನು ಮುಗಿಸಿಬಿಡು, ಈ ಜುಬ್ಬಕ್ಕೆ ಹೊಲಿಗೆ ಹಾಕು. ಇಲ್ಲದಿದ್ದರೆ ಅಡಿಕಟ್ಟಿಗೆಯಿಂದ ಏಟುಬಿದ್ದೀತು!" ಎಂದು ಹೇಳುತ್ತಿದ್ದ.

ಈ ತೆರದ ಕಸರತ್ತು ಎಷ್ಟೋಬಾರಿ ನಡೆಯಿತು. ಅದರಿಂದ ರಾಜಕುಮಾರಿ ತನ್ನ ಪತಿ ಕೀಳುಜಾತಿಯವನೆಂದು ಕಂಡುಹಿಡಿದಳು.

ಈ ವಿಷಯವನ್ನು ಅವಳು ತನ್ನ ತಂದೆಗೆ ಹೇಳಿ ಚಿಪ್ಪಿಗನನ್ನು ಕಳಹಿಸಿಬಿಡಬೇಕೆಂದು ಬೇಡಿಕೊಂಡಳು. ಅದಕ್ಕೆ ರಾಜ "ಈದಿನ ರಾತ್ರಿ ನಿನ್ನ ಮಲಗುವ ಕೋಣೆಗೆ ಬೀಗಹಾಕಬೇಡ. ಸುಮ್ಮನೆ ಬಾಗಿಲು ಸೇರಿಸಿರು. ನಿನ್ನ ಗಂಡ ನಿದ್ದೆ ಹೋದಕೂಡಲೆ ನನ್ನ ಸೇವಕರು ಬಂದು ಅವನನ್ನು ಕೈಕಾಲು ಕಟ್ಟಿ ಹೊತ್ತುಕೊಂಡು ಹೋಗಿ ಒಂದು ಹಡಗಿನಲ್ಲಿ ಯಾವುದಾದರೂ ದೂರದೇಶಕ್ಕೆ ಸಾಗಿಸಿ ಬಿಡುವರು" ಎಂದು ಮಗಳನ್ನು ಸಮಾಧಾನಪಡಿಸಿದ.

ಈ ಉಪಾಯವನ್ನು ಕೇಳಿ ಅವಳಿಗೆ ಬಹಳ ಸಂತೋಷ ವಾಯಿತು. ಆದರೆ ರಾಜನ ಸೇವಕನೊಬ್ಬ ಇವರಿಬ್ಬರಿಗೂ ನಡೆದ ಮಾತುಕತೆಯನ್ನು ಗುಟ್ಟಾಗಿ ಕೇಳಿದ್ದ. ಅವನಿಗೆ ಚಿಪ್ಪಿಗನಮೇಲೆ ಅತಿಶಯವಾದ ಪ್ರೀತಿಯಿತ್ತು. ಆದ್ದರಿಂದ ಅವನು ನಡೆದ ಸಂಗತಿ ಯನೆಲ್ಲಾ ಚಿಪ್ಪಿಗನಿಗೆ ತಿಳಿಸಿಬಿಟ್ಟ. ಚಿಪ್ಪಿಗ "ನಿಶ್ಚಿಂತೆಯಾಗಿರು, ಅದನ್ನು ನಾನೆಲ್ಲಾ ನೋಡಿಕೊಳ್ಳುತ್ತೇನೆ" ಎಂದ.

ರಾತ್ರಿಯಾಯಿತು. ಚಿಪ್ಪಿಗ ಮಲಗಿದ. ಗಂಡ ನಿದ್ದೆಹೋದ ನೆಂದು ಭಾವಿಸಿ ರಾಜಕುಮಾರಿ ಮೆಲ್ಲನೆ ಎದ್ದು ಬಾಗಿಲು ತೆರೆದಳು. ಚಿಪ್ಪಿಗ ನಿದ್ದೆಹೋಗುವವನಂತೆ ನಟಿಸುತ್ತಿದ್ದನೇ ಹೊರತು ನಿಜವಾಗಿ ನಿದ್ದೆಹೋಗಿರಲಿಲ್ಲ. ಬಾಗಿಲು ತೆರೆದ ಕೂಡಲೇ ಅವನು "ಹುಡುಗನೆ, ಬೇಗಕೆಲಸಮಾಡು. ಆ ಅಂಗಿಯನ್ನು ಮುಗಿಸಿಬಿಡು. ಈ ಬುಜ್ಜಕ್ಕೆ ಹೊಲಿಗೆ ಹಾಕು. ಇಲ್ಲದಿದ್ದರೆ ಅಡಿಕಟ್ಟಿಗೆಯಿಂದ ಏಟುಬಿದ್ದೀತು! ನಾನು ಒಂದೇಏಟಿಗೆ ಏಳನ್ನು ಸಂಹರಿಸಿದ್ದೇನೆ! ಇಬ್ಬರು ರಾಕ್ಷಸರನ್ನು ಕೊಂದಿದ್ದೇನೆ? ಒಂದು ಕಾಡುಕೋಣವನ್ನು ಬೇಟೆಯಾಡಿದ್ದೇನೆ! ಇಂಥವನು ನನ್ನ ಕೋಣೆಯ ಬಾಗಿಲ ಹೊರಗೆ ಅವಿತು ನಿಂತಿರು ವವರನ್ನು ನೋಡಿ ಹೆದರುವೆನೆ?" ಎಂದು ಗಟ್ಟಿಯಾದ ಧ್ವನಿಯಲ್ಲಿ ಕೂಗಿದ.

ಇದನ್ನು ಕೇಳಿದೊಡನೆ ಆ ಮೋಸಗಾರರಿಗೆ ಬಹಳ ಭಯವಾಯಿತು. ಅವರು ತಮ್ಮ ಬೆನ್ನಿನ ಹಿಂದೆ ದೊಡ್ಡದೊಂದು ಸೈನ್ಯವೇ ಅಟ್ಟಿಸಿಕೊಂಡು ಬರುತ್ತಿದೆಯೋ ಎನ್ನುವಂತೆ ಓಡಿಹೋದರು. ಅನಂತರ ಅವನಮೇಲೆ ಕೈಮಾಡಲು ಯಾರೂ ರಾಜ್ಯದಲ್ಲಿ ಒಪ್ಪುತ್ತಿರಲಿಲ್ಲ. ಆದ್ದರಿಂದ ಚಿಪ್ಪಿಗ ತಾನು ಬದುಕಿದ್ದಷ್ಟು ದಿನಗಳೂ ರಾಜನಾಗಿಯೇ ಇದ್ದ.

# ಮೂವರು ಸೋಮಾರಿಗಳು

ಬಹುದೂರದ ಒಂದು ದೇಶದಲ್ಲಿ ಒಬ್ಬ ದೊರೆಯಿದ್ದ. ಅವನಿಗೆ ಮೂವರು ಗಂಡುಮಕ್ಕಳಿದ್ದರು. ಅವನು ಅವರಲ್ಲಿ ಎಲ್ಲರನ್ನೂ ಸಮವಾಗಿ ಪ್ರೀತಿಸುತ್ತಿದ್ದ. ತಾನು ಸತ್ತಮೇಲೆ ರಾಜ್ಯ ಯಾರಿಗೆ ಹೋಗಬೇಕೆಂಬುದೇ ಅವನಿಗೆ ಬಗೆಹರಿಯಲಿಲ್ಲ. ಆದ್ದರಿಂದ ತಾನು ಸಾಯುವ ಸಮಯದಲ್ಲಿ ಅವನು ಅವರೆಲ್ಲರನ್ನೂ ತನ್ನ ಹತ್ತಿರಕ್ಕೆ ಕರೆದು, "ಮಕ್ಕಳೆ, ನಿಮ್ಮಲ್ಲಿ ಯಾರು ಅತ್ಯಂತ ಸೋಮಾರಿಯೋ ಅವನು ನನ್ನ ಅನಂತರ ದೊರೆಯಾಗಬೇಕು" ಎಂದು ಹೇಳಿದ.

ಹಿರಿಯಮಗ "ಹಾಗಾದರೆ ರಾಜ್ಯ ನನ್ನದು! ನಾನು ಎಷ್ಟು ಸೋಮಾರಿಯೆಂದರೆ, ನಿದ್ದೆಮಾಡಲು ಮಲಗಿದಾಗ ಕಣ್ಣುಗಳನ್ನು ಮುಚ್ಚಿಕೊಳ್ಳಲು ಆಗದಂತೆ ಅವುಗಳೊಳಗೆ ಏನಾದರೂ ಬಿದ್ದರೂ ಕೂಡ, ಹಾಗೆಯೇ, ಕಣ್ಣು ತೆರೆದುಕೊಂಡೇ, ನಿದ್ದೆಮಾಡುತ್ತೇನೆ ಎಂದ.

ಎರಡನೆಯವನು "ತಂದೆಯೇ, ರಾಜ್ಯ ನನಗೆ ಸೇರಬೇಕು! ನನ್ನ ಸೋಮಾರಿತನ ಎಂತಹುದೆಂದರೆ, ಚಳಿಯಾದಾಗ ಮೈಕಾಯಿಸಿಕೊಳ್ಳಲು ನಾನು ಬೆಂಕಿಯಮುಂದೆ ಬಿದ್ದುಕೊಂಡಾಗ, ಕಾಲಿನ ಬೆರಳುಗಳು ಸುಟ್ಟು ಬೂದಿಯಾದರೂ ಆಗಲಿ ನಾನು ಬೇರೆ ಕಾಲುಗಳನ್ನು ಹಿಂದಕ್ಕೆ ಎಳೆದುಕೊಳ್ಳುವ ಕಷ್ಟಕ್ಕೆ ಹೋಗುವುದಿಲ್ಲ" ಎಂದು ಮೀಸೆ ತಿರುವಿದ.

ಮೂರನೆಯವನು "ತಂದೆಯೇ, ರಾಜ್ಯ ನನ್ನದು! ನಾನು ಎಂತಹ ಸೋಮಾರಿಯೆನ್ನುವೆಯೋ? ನನ್ನನ್ನು ಗಲ್ಲಿಗೇರಿಸುವರು ಎನ್ನೋಣ. ನನ್ನ ಕತ್ತಿನ ಸುತ್ತಲೂ ಹಗ್ಗವನ್ನು ಬಿಗಿದಿದ್ದಾಗ ಯಾರಾದರೂ ಒಂದು ಹರಿತವಾದ ಚೂರಿಯನ್ನು ತಂದು 'ಹಗ್ಗವನ್ನು

ಕತ್ತರಿಸಿಬಿಡು' ಎಂದು ಹೇಳಿ ಅದನ್ನು ನನ್ನ ಕೈಯೊಳಗಿಡಲಿ—ನಾನು ನೇಣಾಗಿ ಸತ್ತರೂ ಚಿಂತೆಯಿಲ್ಲ, ಹಗ್ಗದ ವರೆಗೂ ಕೈಯನ್ನು ಮೇಲಕ್ಕೆತ್ತುವ ತೊಂದರೆ ಮಾತ್ರ ನನ್ನಿಂದ ಆಗದು!" ಎಂದ.

ಇದನ್ನು ಕೇಳಿದೊಡನೆ ಅವನ ತಂದೆ ಸಂತೋಷದಿಂದ ಉಬ್ಬಿ, "ನೀನೇ ನನ್ನ ತರುವಾಯ ರಾಜನಾಗಬೇಕು. ಏಕೆಂದರೆ ನೀನೇ ಇವರೆಲ್ಲರಿಗಿಂತಲೂ ಹೆಚ್ಚು ಅರ್ಹತೆಯನ್ನು ಪಡೆದಿರುವೆ" ಎಂದು ಹೇಳಿ ಪ್ರಾಣಬಿಟ್ಟ.

# ಬುದ್ಧಿವಂತರಾದ ಅಣ್ಣತಮ್ಮಂದಿರು

ಒಂದಾನೊಂದು ಕಾಲದಲ್ಲಿ ಒಬ್ಬ ಮನುಷ್ಯನಿದ್ದ. ಅವನಿಗೆ ಮೂರು ಮಂದಿ ಗಂಡು ಮಕ್ಕಳಿದ್ದರು. ತಾನು ವಾಸಮಾಡುತ್ತಿದ್ದ ಮನೆಯನ್ನು ಬಿಟ್ಟರೆ ಅವನಿಗೆ ಮತ್ತೇನೂ ಆಸ್ತಿಯಿರಲಿಲ್ಲ. ತಾನು ಸತ್ತನಂತರ ತನ್ನ ಮನೆಯನ್ನು ಯಾವ ಮಗನಿಗೆ ಬಿಟ್ಟು ಹೋಗ ಬೇಕೆಂದು ಅವನಿಗೆ ಗೊತ್ತಾಗದೆ ಹೋಯಿತು. ಏಕೆಂದರೆ ಅವನು ಅವರೆಲ್ಲರನ್ನೂ ಒಂದೇ ರೀತಿ ಪ್ರೀತಿಸುತ್ತಿದ್ದ. ಅವರಲ್ಲಿ ಯಾರಿಗೂ ಅನ್ಯಾಯ ಮಾಡಲು ಅವನಿಗೆ ಇಷ್ಟವಿರಲಿಲ್ಲ. ಮನೆಯನ್ನು ಮಾರಿ ಬಂದ ದುಡ್ಡನ್ನು ಮೂವರಿಗೂ ಸಮವಾಗಿ ಹಂಚಿ ಬಿಡಬಹುದಾ ಗಿತ್ತು. ಆದರೆ ಅದಕ್ಕೂ ಅವನ ಮನಸ್ಸು ಒಪ್ಪಲಿಲ್ಲ. ಆ ಮನೆ ಅವರ ಅಜ್ಜಂದಿರ ಕಾಲದ್ದು. ಅದನ್ನು ಬೇರೆಯವರ ವಶಮಾಡಲು ಅವನಿಗೆ ಕೈಬರಲಿಲ್ಲ. ಏನು ಮಾಡಬೇಕೆಂದು ಅವನು ಬಹಳ ಯೋಚಿಸಿದ. ಕಡೆಗೆ ಒಂದು ಉಪಾಯ ಹೊಳೆಯಿತು. ಅವನು ಮಕ್ಕಳನ್ನು ಕರೆದು "ನೀವು ಮೂವರೂ ಎಲ್ಲಾದರೂ ಹೋಗಿ ಒಂದೊಂದು ಕೆಲಸವನ್ನು ಕಲಿತುಕೊಂಡು ಬನ್ನಿ. ನೀವು ಹಿಂದಿರುಗಿ ದಾಗ ಯಾರು ತನ್ನ ಕೆಲಸದಲ್ಲಿ ಅತ್ಯಂತ ಹೆಚ್ಚಿನ ಚಾತುರ್ಯವನ್ನು ತೋರಿಸುವನೋ ಅವನಿಗೆ ಮನೆ ಸೇರುವುದು" ಎಂದು ಹೇಳಿದ.

ಮಕ್ಕಳು ಇದಕ್ಕೆ ಒಪ್ಪಿದರು. ಹಿರಿಯವನು ಕುದುರೆಗಳಿಗೆ ಲಾಳ ಕಟ್ಟುವುದನ್ನು ಕಲಿತ; ಎರಡನೆಯವನು ಹಜಾಮನಾದ; ಮೂರನೆಯವನು ಕತ್ತಿವರಸೆಯಲ್ಲಿ ನಿಪುಣನಾದ. ಅವರೆಲ್ಲರಿಗೂ ಒಳ್ಳೆಯ ಗುರುಗಳೇ ದೊರೆತರು. ಎಲ್ಲರೂ ತಮ್ಮ ತಮ್ಮ ಕೆಲಸ ಗಳನ್ನು ಚೆನ್ನಾಗಿ ಕಲಿತರು.

ಮೊದಲನೆಯವನಿಗೆ ರಾಜನ ಕುದುರೆಗಳಿಗೆ ಲಾಳ ಕಟ್ಟುವ ಕೆಲಸ ದೊರೆಯಿತು. ಅವನು ಮನೆ ತನಗೇ ಸೇರುವುದು ನಿಸ್ಸಂಶಯ ವೆಂದು ನಿಶ್ಚಯಿಸಿಬಿಟ್ಟ. ಹಜಾಮ ದೊಡ್ಡಮನುಷ್ಯರಿಗೆ ಮಾತ್ರ

ಕ್ಷೌರ ಮಾಡುತ್ತಿದ್ದುದರಿಂದ ಅವನೂ ಮನೆ ತನ್ನದೇ ಎಂದು ಖಂಡಿತ ಮಾಡಿದ್ದ. ಕತ್ತಿವರಸೆಯ ನಿಪುಣನಿಗೆ ಮಾತ್ರ ಬರಿಯ ಏಟುಗಳು ಬಿದ್ದವು. ಆದರೆ ಅವನು ತುಟಿ ಕಚ್ಚಿಕೊಂಡು ಸುಮ್ಮನಿರುತ್ತಿದ್ದನೇ ಹೊರತು ಯಾವ ತೊಂದರೆಗೂ ಹೆದರುತ್ತಿರಲಿಲ್ಲ. "ನಾನು ಒಂದು ಏಟಿಗೆ ಹೆದರಿದರೆ ಮನೆ ನನಗೆ ಹೇಗೆ ಸೇರೀತು?" ಎನ್ನುತ್ತಿದ್ದ.

ಸಮಯ ಬಂದಾಗ ಮೂವರು ಅಣ್ಣ ತಮ್ಮಂದಿರೂ ತಂದೆಯ ಮನೆಗೆ ಹಿಂದಿರುಗಿದರು. ಆದರೆ ಅವರಿಗೆ ತಮ್ಮ ತಮ್ಮ ಕಸಬಿನ ಕುಶಲತೆಯನ್ನು ಹೇಗೆ ತೋರಿಸಬೇಕೆಂದು ತೋರಲಿಲ್ಲ. ಆದ್ದರಿಂದ ಎಲ್ಲರೂ ಸುಮ್ಮನೆ ಕುಳಿತು ಮಾತಾಡುತ್ತಿದ್ದರು. ಆಗ ಅವರ ಎದುರಿಗೆ ಒಂದು ಮೊಲ ಓಡಿಹೋಯಿತು.

ಅದನ್ನು ಕಂಡು ಕ್ಷೌರಕ "ಹಾ! ಸಮಯಕ್ಕೆ ಸರಿಯಾಗಿ ಬಂದಿದೆ!" ಎಂದು ಕೂಗುತ್ತ ಎದ್ದು ತನ್ನ ನೀರಿನ ಬಟ್ಟಲನ್ನೂ ಕತ್ತಿಯನ್ನೂ ತೆಗೆದುಕೊಂಡು ಅದರ ಹಿಂದೆಯೇ ಓಡಿಹೋದ. ಅದು ಓಡುತ್ತಿದ್ದ ಹಾಗೆಯೇ ಅವನು ಅದರ ಮೀಸೆಗಳಿಗೆ ಸಾಬೂನು ಹಚ್ಚಿ ಅದರ ದೇಹದ ಮೇಲಿದ್ದ ಬೇರೆ ಒಂದು ಕೂದಲಿಗೂ ಅಪಾಯವಾಗದ ರೀತಿಯಲ್ಲಿ ಆ ಮೀಸೆಗಳನ್ನು ಮಾತ್ರ ಹೆರೆದು ಹಾಕಿದ. ಆ ಪ್ರಾಣಿಗೆ ಒಂದಿಷ್ಟೂ ಗಾಯವಾಗಲಿ ನೋವಾಗಲಿ ಆಗಲಿಲ್ಲ.

ಇದನ್ನು ನೋಡಿ ಅವನ ತಂದೆ "ಶಹಬಾಸ್! ನಿನ್ನನ್ನು ಸೋಲಿಸುವುದು ನಿನ್ನ ಸಹೋದರರಿಗೆ ಸುಲಭವಾದ ಕೆಲಸವಲ್ಲ!" ಎಂದು ಕೂಗಿದ.

ಸ್ವಲ್ಪ ಹೊತ್ತಿನಲ್ಲೇ ದೊಡ್ಡ ಮನುಷ್ಯನೊಬ್ಬನು ತನ್ನ ಕುದುರೆಯ ಗಾಡಿಯಲ್ಲಿ ಕುಳಿತು ಆ ಮಾರ್ಗವಾಗಿ ಬಂದ. ಗಾಡಿಯನ್ನು ನಾಲ್ಕು ಕುದುರೆಗಳು ಎಳೆಯುತ್ತಿದ್ದವು

ಮೊದಲನೆಯ ಮಗ "ಈಗ ನನ್ನನ್ನು ಸ್ವಲ್ಪ ನೋಡುತ್ತಿರಿ" ಎಂದು ಗಾಡಿಯ ಹಿಂದೆಯೇ ಓಡಿಹೋದ. ಅವನು ಕುದುರೆಗಳು ಓಡುತ್ತಿದ್ದಂತೆಯೇ ಅವುಗಳಲ್ಲಿ ಒಂದು ಕುದುರೆಯ ನಾಲ್ಕು ಕಾಲುಗಳ ಗೊರಸಿನಲ್ಲೂ ಇದ್ದ ಹಳೆಯ ಲಾಳಗಳನ್ನು ತೆಗೆದುಬಿಟ್ಟು

ಅವುಗಳಿಗೆ ಬದಲಾಗಿ ಹೊಸ ಲಾಳಗಳನ್ನು ಕಟ್ಟಿದ. ಇಷ್ಟಾದರೂ ಗಾಡಿ ಅತ್ಯಂತ ವೇಗವಾಗಿ ಹೋಗುತ್ತಲೇ ಇತ್ತು.

ಮುದುಕ ಈಗ "ಭಲೇ! ನೀನೂ ನಿನ್ನ ದೊಡ್ಡ ತಮ್ಮನಷ್ಟೇ ಬುದ್ಧಿವಂತ!" ಎಂದು ಕೂಗಿದ.

ಮೂರನೆಯ ಹುಡುಗ "ಇನ್ನು ನನ್ನ ಸರದಿ!" ಎಂದ. ಅಷ್ಟರಲ್ಲಿ ಮಳೆ ಬೀಳಲು ಆರಂಭವಾಯಿತು. ಅವನು ತನ್ನ ಕತ್ತಿಯನ್ನು ಹೊರಕ್ಕೆ ಎಳೆದು ಅದನ್ನು ತನ್ನ ತಲೆಯ ಮೇಲೆ ಗಿರಗಿರನೆ ತಿರುಗಿಸುತ್ತ ನಿಂತ. ಅದು ರೊಯ್ಯನೆ ಶಬ್ದ ಮಾಡುತ್ತಿತ್ತು. ಅದು ಎಷ್ಟು ಜೋರಾಗಿ ತಿರುಗುತ್ತಿದ್ದಿತೆಂದರೆ, ಮಳೆಯ ಒಂದು ಹನಿ ಕೂಡ ಅವನ ಮೇಲೆ ಬೀಳಲಿಲ್ಲ. ಮಳೆ ಹೆಚ್ಚಾಗುತ್ತಿತ್ತು. ಕಡೆಗೆ ಅದು ಪ್ರಳಯಕಾಲದ ಮಳೆಯಂತೆ ಸುರಿಯತೊಡಗಿತು. ಆದರೂ ಅವನು ಕತ್ತಿಯನ್ನು ಮಿಂಚಿನ ತೆರದಲ್ಲಿ ತನ್ನ ತಲೆಯ ಮೇಲೆ ಚಕ್ರಾಕಾರದಲ್ಲಿ ಝಳಪಿಸುತ್ತಾ ನಿಂತಿದ್ದ. ಅವನ ಮೈಮೇಲಿದ್ದ ಬಟ್ಟೆ ಬರೆಗಳು ಅವನು ಮನೆಯ ಒಳಗಡೆ ಇದ್ದರೆ ಇರುತ್ತಿದ್ದಂತೆಯೇ ಒಣಗಿ ಗರಿಗರಿಯಾಗಿದ್ದವು.

ಅವನ ತಂದೆ ಇದನ್ನು ಅತ್ಯಾಶ್ಚರ್ಯದಿಂದ ಕಣ್ಣು ಬಿಟ್ಟುಕೊಂಡು ನೋಡಿದ. ತನ್ನ ತರುವಾಯ ಮನೆ ಕತ್ತಿಯ ವರಸೆಯ ನಿಪುಣನಿಗೇ ಸೇರಬೇಕೆಂದು ಹೇಳಿದ.

ಆದರೆ ಆ ಮೂವರು ಅಣ್ಣ ತಮ್ಮಂದಿರೂ ಒಬ್ಬರನ್ನೊಬ್ಬರು ಬಹಳವಾಗಿ ಪ್ರೀತಿಸುತ್ತಿದ್ದರು. ಆದ್ದರಿಂದ ಅವರು ತಮ್ಮ ತಮ್ಮ ಕೆಲಸಗಳನ್ನು ನೋಡಿಕೊಳ್ಳುತ್ತಾ ಎಲ್ಲರೂ ಅದೇ ಮನೆಯಲ್ಲೇ ಒಟ್ಟಿಗೆ ವಾಸಿಸುತ್ತಿದ್ದರು.

ಕಡೆಗೆ ಎಲ್ಲರಂತೆ ಅವರೂ ಮುದುಕರಾದರು. ಅವರಲ್ಲಿ ಒಬ್ಬ ಸತ್ತ. ಆಗ ಇನ್ನಿಬ್ಬರೂ ಕಾಯಿಲೆಯಾಗಿ ಅವರೂ ಸತ್ತು ಹೋದರು. ನೆರಹೊರೆಯ ಜನ ಅವರೆಲ್ಲರಿಗೂ ಒಂದೇ ಗುಣಿಯಲ್ಲಿ ಸಮಾಧಿ ಮಾಡಿದರು.

# ನಾಲ್ವರು ಸಂಗೀತಗಾರರು

ಒಬ್ಬ ಅಗಸನ ಹತ್ತಿರ ಒಂದು ಕತ್ತೆಯಿತ್ತು. ಅದು ಅವನ ಬಳಿ ಬಹಳಕಾಲ ನಂಬಿಕೆಗೆ ಅರ್ಹನಾದ ಸೇವಕನಂತೆ ಕೆಲಸ ಮಾಡಿ ಕೊಂಡಿತ್ತು. ಆದರೆ ಕಾಲಕ್ರಮೇಣ ಆ ಕತ್ತೆಗೆ ವಯಸ್ಸಾಗಿ, ಮುಪ್ಪಿ ನಿಂದ ಅದರ ಶಕ್ತಿ ದಿನೇ ದಿನೇ ಕಡಿಮೆಯಾಯಿತು. ಅದರಿಂದ ಈಗ ಯಾವ ಕೆಲಸವೂ ಸಾಗುತ್ತಿರಲಿಲ್ಲ.

ಇಂಥ ಪ್ರಯೋಜನವಿಲ್ಲದ ಪ್ರಾಣಿಗೆ ಏಕೆ ಅನ್ಯಾಯವಾಗಿ ಅನ್ನ ನೀರು ಕೊಟ್ಟು ದುಡ್ಡು ಕಳೆದುಕೊಳ್ಳಬೇಕು ಎಂದು ಅಗಸ ನಿಗೆ ಯೋಚನೆ ಮೂಡಿತು. ಆದಕಾರಣ ಅದನ್ನು ಉಪವಾಸ ಕೆಡವಿ ಸಾಯಿಸಿ ಬಿಡಬೇಕೆಂದು ಆ ಕಟುಕ ತೀರ್ಮಾನಿಸಿದ.

ಅವನ ದುರುದ್ದೇಶ ಕತ್ತೆಗೆ ಹೇಗೋ ತಿಳಿದುಹೋಯಿತು. ಆದುದರಿಂದ ಅದು ಒಂದು ದಿನ ಯಾರಿಗೂ ಕಾಣದಂತೆ ಅಗಸನ ಮನೆಯಿಂದ ಪರಾರಿಯಾಗಿ ಅರಣ್ಯದ ಆಚೆ ಇದ್ದ ಬೊಮ್ಮನಪುರ ಎಂಬ ಊರಿಗೆ ಹೊರಟಿತು. " ಆ ಊರಿನ ಜನಕ್ಕೆ ಸಂಗೀತವೆಂದರೆ ಬಲು ಇಷ್ಟ. ನನ್ನ ಕಂಠವನ್ನು ಮೆಚ್ಚಿಕೊಂಡಾದರೂ ಅವರು ನನಗೆ ಆಶ್ರಯ ನೀಡಬಹುದು " ಎಂದು ಅದು ಯೋಚಿಸಿತು.

ಕತ್ತೆ ಸ್ವಲ್ಪದೂರ ಹೋದಾಗ ದಾರಿಯಲ್ಲಿ ಒಂದು ನಾಯಿ ಆಯಾಸದಿಂದ ನಾಲಗೆಯನ್ನು ಹೊರಕ್ಕೆ ಚಾಚಿ ಏದುತ್ತ ಬಿದ್ದು ಕೊಂಡಿತ್ತು. ಕತ್ತೆ ಅದನ್ನು ನೋಡಿ, " ಸ್ನೇಹಿತನೆ, ಹೀಗೇಕೆ ಉಸಿರು ಬಿಡುತ್ತಿರುವೆ ? " ಎಂದು ಕೇಳಿತು.

ನಾಯಿ ಅಯ್ಯೋ! ಏನು ಹೇಳಲಿ. ನನಗೆ ವಯಸ್ಸಾಗಿ ಹೋಯಿತು. ನನಗೀಗ ಬೇಟೆಯಾಡಲು ಸ್ವಲ್ಪವೂ ಶಕ್ತಿಯಿಲ್ಲ. ಅದ್ದ ರಿಂದ ನನ್ನ ಯಜಮಾನ ನನ್ನ ತಲೆ ಒಡೆಯಬೇಕೆಂದು ಹವಣಿಸು

ತ್ತಿದ್ದ. ನಾನು ಹೇಗೋ ತಪ್ಪಿಸಿಕೊಂಡು ಮೆಲ್ಲನೆ ಓಡಿ ಬಂದುಬಿಟ್ಟೆ. ಈಗ ಹೊಟ್ಟೆ ಹೊರೆಯುವುದು ಹೇಗೆಂದು ಯೋಚಿಸುತ್ತಿದ್ದೇನೆ" ಎಂದಿತು.

ಕತ್ತೆ "ಇಲ್ಲಿ ಕೇಳು. ನಾನು ಸಂಗೀತಗಾರನಾಗಬೇಕೆಂದು ಬೊಮ್ಮನಪುರಕ್ಕೆ ಹೋಗುತ್ತಿದ್ದೇನೆ. ನೀನೂ ನನ್ನೊಡನೆ ಬಂದು ಅದೃಷ್ಟ ಹೇಗಿದೆಯೋ ನೋಡಿದರೆ ಒಳ್ಳೆಯದಲ್ಲವೇ ?" ಎಂದಿತು.

ನಾಯಿ ಕತ್ತೆಯ ಜೊತೆಯಲ್ಲಿ ಹೋಗಲು ಒಪ್ಪಿಕೊಂಡಿತು. ಎರಡೂ ನಿಧಾನವಾಗಿ ನಡೆಯತೊಡಗಿದವು.

ಅವು ಇನ್ನೂ ಬಹಳದೂರ ಹೋಗಿರಲಿಲ್ಲ. ಒಂದು ಬೆಕ್ಕು ಪೆಚ್ಚುಮೋರೆ ಹಾಕಿಕೊಂಡು ದಾರಿಯ ನಡುವೆ ಕುಳಿತಿತ್ತು. ಕತ್ತೆ "ಅಮ್ಮ, ನಿನಗೇನಾಗಿದೆ ? ಹೀಗೇಕೆ ಮಂಕಾಗಿ ಕೂತಿರುವೆ ?" ಎಂದು ಕೇಳಿತು.

ಬೆಕ್ಕು "ಹಾ ! ಪ್ರಾಣವೇ ಹೋಗಿರುವಂತೆ ಆಗಿರುವಾಗ ಯಾರಿಗೆ ತಾನೆ ಮುಖದಲ್ಲಿ ಸಂತೋಷ ಇರುತ್ತದೆ ? ನನಗೆ ವಯಸ್ಸಾಗುತ್ತ ಬಂದುದರಿಂದ ನನ್ನ ಯಜಮಾನಿ ನನ್ನನ್ನು ತೆಗೆದುಕೊಂಡು ಹೋಗಿ ಒಂದು ದೊಡ್ಡ ತೊಟ್ಟಿಯ ತುಂಬಾ ಇದ್ದ ನೀರಿನಲ್ಲಿ ಮುಳುಗಿಸಿ ಬಿಡುತ್ತಿದ್ದಳು. ತಿರುಪತಿ ತಿಮ್ಮಪ್ಪನ ದಯದಿಂದ ಅಷ್ಟರಲ್ಲಿ ನಾನು ತಪ್ಪಿಸಿಕೊಂಡು ಬಂದೆ. ಈಗ ಮುಂದೆ ಹೊಟ್ಟೆಯ ಪಾಡು ಹೇಗೆ ಎಂದು ಚಿಂತಿಸುತ್ತಿದ್ದೇನೆ. ಎಷ್ಟು ಯೋಚಿಸಿದರೂ ಏನೂ ತೋಚುವುದೇ ಇಲ್ಲ. ಏನು ಮಾಡಲಿ ?" ಎಂದಿತು.

ಕತ್ತೆ "ಓಹೋ ! ಹಾಗಾದರೆ ನಮ್ಮ ಜೊತೆಯಲ್ಲಿ ನೀನೂ ಬೊಮ್ಮನಪುರಕ್ಕೆ ಬಾ. ನೀನು ರಾತ್ರಿಯವೇಳೆ ಬಹಳ ಚೆನ್ನಾಗಿ ಹಾಡುತ್ತೀಯ. ಆದ್ದರಿಂದ ನಿನಗೂ ಅಲ್ಲಿ ಲಾಭ ದೊರೆಯಬಹುದು" ಎಂದಿತು.

ಬೆಕ್ಕಿಗೆ ಕತ್ತೆ ಹೇಳುವುದು ಸರಿ ಎಂದು ತೋರಿತು. ಅದೂ ಅವುಗಳೊಡನೆ ಹೊರಟಿತು.

ಸ್ವಲ್ಪಹೊತ್ತಿನ ನಂತರ ಈ ಮೂರು ಪ್ರಾಣಿಗಳೂ ಒಂದು ಹೊಲದ ಬದುವಿನ ಮೇಲೆ ಹೋಗುತ್ತಿದ್ದವು. ಅಲ್ಲಿ ಒಂದು ಹುಂಜ ಕುಳಿತು ಗಟ್ಟಿಯಾಗಿ ಕಿರುಚುತ್ತಿತ್ತು.

ಕತ್ತೆ " ಶಹಬಾಸ್ ! ನಿನ್ನ ಹಾಡು ಪ್ರಸಿದ್ಧವಾದುದು. ಹೀಗೇಕೆ ಕಿರುಚುತ್ತಿರುವೆ ? " ಎಂದಿತು.

ಹುಂಜ " ಈ ದಿವಸ ಮಳೆ ಬರುತ್ತದೆ ಎಂದು ನಾನು ಕೂಗಿ ಕೂಗಿ ಸಾಕಾಯಿತು. ಆದರೂ ನನ್ನ ಯಜಮಾನರು ನನ್ನ ಮಾತಿಗೆ ಕಿವಿಗೊಡದೆ ನನ್ನ ಕತ್ತು ಕಿವುಚುವುದಾಗಿ ಹೇಳುತ್ತಾರೆ. ಎಂಥ ಅನ್ಯಾಯ ! " ಎಂದು ಹೇಳಿತು.

ಕತ್ತೆ " ಅಯ್ಯಯ್ಯೋ ! ಎಲ್ಲಾದರೂ ಉಂಟೆ ! ಇಲ್ಲಿ ಇದ್ದು ಕತ್ತು ಕಿವುಚಿಸಿಕೊಳ್ಳುವುದಕ್ಕಿಂತಲೂ ನಮ್ಮ ಸಂಗಡ ಬರುವುದು ಮೇಲು. ಬಾರಯ್ಯ, ಹುಂಜರಾಜ ! ಯಾರು ಬಲ್ಲರು ? ನಾವೆಲ್ಲರೂ ಸರಿಯಾದ ಧ್ವನಿಯಲ್ಲಿ ಹಾಡಿದರೆ ಒಂದು ಸೊಗಸಾದ ಸಂಗೀತ ಕಛೇರಿಯನ್ನೇ ನಡೆಸಬಹುದು. ಇಲ್ಲೇಕಿರುವೆ ? ಬಂದುಬಿಡು. ನಮ್ಮ ಜೊತೆಯಲ್ಲಿ ! ಎಂದಿತು.

ಹುಂಜ " ಆಗತ್ಯವಾಗಿ ಬರುತ್ತೇನೆ ! " ಎಂದಿತು.

ನಾಲ್ಕು ಪ್ರಾಣಿಗಳೂ ಸಂತೋಷದಿಂದ ಮುಂದೆ ನಡೆದವು. ಆದರೆ ಅದೇದಿನವೇ ಬೊಮ್ಮನ ಪುರವನ್ನು ಸೇರಲು ಅವಕ್ಕೆ ಸಾಧ್ಯವಾಗಲಿಲ್ಲ. ರಾತ್ರಿಯಾದಾಗ ಅವು ಮಲಗಿ ನಿದ್ರಿಸಲು ಒಂದು ಕಾಡಿನೊಳಕ್ಕೆ ಹೋದವು. ಕತ್ತೆಯೂ ನಾಯಿಯೂ ಒಂದು ದೊಡ್ಡ ಮರದ ಕೆಳಗೆ ಮಲಗಿದವು. ಬೆಕ್ಕು ಕೊಂಬೆಗಳ ನಡುವೆ ಕುಳಿತುಕೊಂಡಿತು. ಹುಂಜ ಎಷ್ಟು ಎತ್ತರದಲ್ಲಿ ಕುಳಿತರೆ ಅಷ್ಟು ಕ್ಷೇಮವೆಂದು ಭಾವಿಸಿ ಮರದ ತುತ್ತ ತುದಿಯಲ್ಲಿ ಕುಳಿತುಕೊಂಡಿತು

ಮಲಗುವ ಮೊದಲು ಎಲ್ಲವೂ ಸರಿಯಾಗಿದೆಯೋ ಇಲ್ಲವೋ ಎಂದು ನೋಡಲು ಹುಂಜ ಸುತ್ತಲೂ ಕಣ್ಣು ತಿರುಗಿಸಿತು. ಹೀಗೆ ನೋಡುವಾಗ ಅದಕ್ಕೆ ದೂರದಲ್ಲಿ ಪ್ರಕಾಶವಾಗಿಪ್ಪುದು ಏನೋ

ಕಂಡು ಬಂತು. ಅದು ತನ್ನ ಸಂಗಾತಿಗಳನ್ನು ಕರೆದು "ಹತ್ತಿರದಲ್ಲೇ ಒಂದು ಮನೆ ಇರಬೇಕು; ದೀಪ ಕಾಣಿಸುತ್ತಿದೆ" ಎಂದಿತು.

ಕತ್ತೆ "ಹಾಗಾದರೆ ನಾವು ಅಲ್ಲಿಗೆ ಹೋಗುವುದು ಉತ್ತಮ. ಈ ಸ್ಥಳ ಅಷ್ಟೇನೂ ಚೆನ್ನಾಗಿಲ್ಲ" ಎಂದು ಹೇಳಿತು.

ನಾಯಿ "ಅಲ್ಲಿ ಒಂದು ತುಂಡು ಮಾಂಸ ಗೀಂಸ ಸಿಕ್ಕಿದರೆ ನನಗೆ ಮತ್ತೂ ಸಂತೋಷ" ಎಂದಿತು.

ಅವು ಎದ್ದು ಹುಂಜ ದೀಪ ನೋಡಿದ್ದ ಕಡೆಗೆ ಹೊರಟವು. ಅವು ಹತ್ತಿರ ಬಂದಂತೆಲ್ಲಾ ಆ ದೀಪ ದೊಡ್ಡದೂ ಹೆಚ್ಚುಹೆಚ್ಚು ಪ್ರಕಾಶಮಯವೂ ಆಯಿತು. ಕೊನೆಗೆ ಅವು ಒಂದು ಮನೆಯ ಸಮೀಪಕ್ಕೆ ಬಂದವು. ಆ ಮನೆಯಲ್ಲಿ ಕಳ್ಳರ ಒಂದು ಗುಂಪು ವಾಸವಾಗಿತ್ತು.

ಕತ್ತೆ ಇತರ ಮೂರು ಪ್ರಾಣಿಗಳಿಗಿಂತಲೂ ಎತ್ತರವಾಗಿದ್ದುದರಿಂದ ಅದು ಕಿಟಕಿಯ ಬಳಿಗೆ ಹೋಗಿ ಒಳಗೆ ಇಣಿಕಿ ನೋಡಿತು.

ಹುಂಜ "ಕತ್ತೆಯೇ, ಏನು ಕಾಣುತ್ತದೆ?" ಎಂದು ಕೇಳಿತು.

"ಏನು ಕಾಣುವುದು? ಒಳಗೆ ತಟ್ಟೆಗಳ ತುಂಬಾ ಒಳ್ಳೊಳ್ಳೆಯ ಪದಾರ್ಥಗಳನ್ನು ಬಡಿಸಿದ್ದಾರೆ. ಕಳ್ಳರು ಕುಳಿತು ತಿಂದು ತೇಗಿ ಆನಂದಿಸುತ್ತಿದ್ದಾರೆ." ಎಂದು ಕತ್ತೆ ಉತ್ತರ ಕೊಟ್ಟಿತು.

ಹುಂಜ "ಈ ಮನೆ ನಾವು ವಾಸಮಾಡುವುದಕ್ಕೆ ಬಹಳ ಚೆನ್ನಾಗಿದೆ." ಎಂದಿತು.

ಕತ್ತೆ "ಹೌದು! ಆದರೆ ನಾವು ಒಳಕ್ಕೆ ಹೋಗುವುದು ಹೇಗೆ? ಎಂದಿತು.

ಅವುಗಳೆಲ್ಲಾ ಕಳ್ಳರನ್ನು ಹೊರಕ್ಕೆ ಓಡಿಸುವ ಬಗೆ ಹೇಗೆಂದು ಆಲೋಚನೆ ಮಾಡಿ, ಕಡೆಗೆ ಒಂದು ಉಪಾಯ ಹುಡುಕಿದವು. ಕತ್ತೆ ಉದ್ದಕ್ಕೆ ತನ್ನ ಹಿಂದಿನ ಕಾಲುಗಳನ್ನು ನೆಲದ ಮೇಲೂ ಮುಂದಿನ ಎರಡು ಕಾಲುಗಳನ್ನು ಕಿಟಕಿಯ ಮೇಲೂ ಇಟ್ಟುಕೊಂಡು ನಿಂತಿತು. ನಾಯಿ ಕತ್ತೆಯ ಬೆನ್ನಿನ ಮೇಲೆ ಹತ್ತಿ ನಿಂತಿತು. ಬೆಕ್ಕು

ನಾಯಿಯ ಬೆನ್ನಿಗೇರಿತು. ಹುಂಜ ಹಾರಿ ಹೋಗಿ ಬೆಕ್ಕಿನ ತಲೆಯ ಮೇಲೆ ಕುಳಿತುಕೊಂಡಿತು.

ಎಲ್ಲವೂ ಸಿದ್ಧವಾದ ಮೇಲೆ ಕತ್ತೆ ಸೂಚನೆ ಕೊಡಲು ಅವೆಲ್ಲಾ ಒಂದೇ ಸಾರಿ ತಮ್ಮ ಸಂಗೀತವನ್ನು ಆರಂಭಿಸಿದವು. ಕತ್ತೆ ಅರಚಿತು, ನಾಯಿ ಬೊಗಳಿತು, ಬೆಕ್ಕು "ಮಿಯಾವ್" ಎಂದಿತು, ಹುಂಜ "ಕ್ಕೊಕ್ಕೋಕ್ಕೋ" ಎಂದಿತು. ಅನಂತರ ಅವೆಲ್ಲವೂ ಒಟ್ಟಿಗೆ ಕಿಟಕಿಯ ಗಾಜಿನ ಬಾಗಿಲನ್ನು ಒಡೆದು ಒಳಕ್ಕೆ ಹಾರಿದವು. ಗಾಜು ಚಟಪಟ ಸದ್ದುಮಾಡಿ ಚೂರು ಚೂರಾಗಿ ಬಿತ್ತು. ಮೊದಲು ಸಂಗೀತವನ್ನು ಕೇಳಿಯೇ ಹೆದರಿದ್ದ ಕಳ್ಳರು ಈಗ ಯಾವುದೋ ಒಂದು ಭಯಂಕರವಾದ ಭೂತ ತಮ್ಮ ಮೇಲೆ ಬೀಳಲು ಬಂದಿರಬೇಕೆಂದು ತಿಳಿದು ಆದಷ್ಟು ಬೇಗ ಎದ್ದು ಕಾಲುಕಿತ್ತು ಓಡಿದರು.

ಅನಂತರ ಅವು ನಿರ್ಭಯವಾಗಿ ತಟ್ಟೆಗಳ ಮುಂದೆ ಕುಳಿತು ಕಳ್ಳರು ಬಿಟ್ಟು ಹೋಗಿದ್ದುದನ್ನೆಲ್ಲಾ ಮುಗಿಸಿದವು. ಅವು ತಿನ್ನುತ್ತಿದ್ದ ಭರವನ್ನು ನೋಡಿದರೆ ಅವಕ್ಕೆ ಇನ್ನು ತಿಂಗಳುಗಟ್ಟಲೆ ತಿಂಡಿ ಸಿಕ್ಕುವುದಿಲ್ಲವೇನೋ ಎಂದು ತೋರುತ್ತಿತ್ತು.

ತಿಂದು ತೃಪ್ತಿಯಾದ ಮೇಲೆ ಅವು ದೀಪಗಳನ್ನು ಆರಿಸಿ ಅಲ್ಲಲ್ಲಿ ಮಲಗಿಕೊಂಡವು. ಕತ್ತೆ ಹಿತ್ತಲಲ್ಲಿದ್ದ ಹುಲ್ಲು ಕಂತೆಯ ಮೇಲೆ ಮಲಗಿತು. ನಾಯಿ ಹಿಂಬಾಗಿಲ ಹಿಂದಿದ್ದ ಚಾಪೆಯ ಮೇಲೆ ಕಾಲು ಚಾಚಿ ಬಿದ್ದುಕೊಂಡಿತು. ಬೆಕ್ಕು ಬೆಂಕಿಯ ಮುಂದಿದ್ದ ಬೂದಿಯಲ್ಲಿ ಬೆಚ್ಚಗೆ ಮುದುರಿತು. ಹುಂಜ ಮನೆಯ ಮೇಲ್ಭಾಗದ ಒಂದು ತೊಲೆಯ ಮೇಲೆ ಕುಳಿತುಕೊಂಡಿತು. ಎಲ್ಲಕ್ಕೂ ಪ್ರಯಾಣದ ಆಯಾಸ ಬಹಳವಾಗಿದ್ದುದರಿಂದ ಮಲಗಿದ ಕೂಡಲೆ ನಿದ್ದೆ ಬಂತು.

ಮಧ್ಯರಾತ್ರಿಯ ಹೊತ್ತಿಗೆ ಕಳ್ಳರು ತಮ್ಮ ಮನೆಯ ಕಡೆಗೆ ತಿರುಗಿ ನೋಡಿದರು. ದೀಪ ಆರಿತ್ತು. ಅದನ್ನು ಕಂಡು ತಾವು ಓಡಿ ಬಂದುದು ಹೇಡಿತನವೆಂದೂ ತಾವು ಅಷ್ಟು ಅವಸರದಿಂದ ಬರಬಾರದಾಗಿತ್ತೆಂದೂ ಅವರಿಗೆ ತೋರಿತು. ಅವರಲ್ಲಿ ಅತ್ಯಂತ ಧೈರ್ಯಶಾಲಿ

ಯಾದವನು ವಿಚಾರವೇನೋ ನೋಡೋಣವೆಂದು ಮೆಲ್ಲನೆ ಮನೆಗೆ ಹಿಂತಿರುಗಿದ.

ಮನೆಯಲ್ಲಿ ಎಲ್ಲವೂ ನಿಶ್ಯಬ್ದವಾಗಿತ್ತು. ಆದ್ದರಿಂದ ಅವನು ಅಡುಗೆಯ ಮನೆಯ ಒಳಕ್ಕೆ ಹೋಗಿ, ದೀಪ ಹಚ್ಚಲು ಬೆಂಕಿಯ ಕಡ್ಡಿಗಾಗಿ ತಡಕಾಡಿದ. ಇವನು ಮಾಡಿದ ಸದ್ದಿನಿಂದ ಬೆಂಕಿಯ ಪಕ್ಕದಲ್ಲಿ ಮಲಗಿದ್ದ ಬೆಕ್ಕಿಗೆ ಎಚ್ಚರವಾಗಿ ಅದು ಕಣ್ಣು ತೆರೆಯಿತು. ಬಹಳ ಹುಡುಕಿದ ಮೇಲೆ ಅವನಿಗೆ ಗೋಡೆಯ ಮಾಡದಲ್ಲಿ ಒಂದೇ ಒಂದು ಕಡ್ಡಿ ಸಿಕ್ಕಿತು. ಆದರೆ ಅದನ್ನು ಗೀಚಲು ಅದರ ಪೆಟ್ಟಿಗೆ ಸಿಕ್ಕಲಿಲ್ಲ.

ಅಷ್ಟರಲ್ಲಿ ಅವನಿಗೆ ಬೆಂಕಿಯಂತೆಯೇ ಥಳಥಳಿಸುತ್ತಿದ್ದ ಬೆಕ್ಕಿನ ಕಣ್ಣುಗಳು ಕಾಣಿಸಿದವು. ಅವನು ಅವು ನಿಜವಾದ ಕೆಂಡಗಳೆಂದು ಭಾವಿಸಿ ಕಡ್ಡಿಯನ್ನು ಹೊತ್ತಿಸಲು ಅದನ್ನು ಬೆಕ್ಕಿನ ಕಣ್ಣಿಗೆ ಹಿಡಿದ. ಪಾಪ, ಬೆಕ್ಕಿಗೆ ಇವನ ಅಭಿಪ್ರಾಯ ಅರ್ಥವಾಗಲಿಲ್ಲ. ಅದು ಅವನ ಮುಖದ ಮೇಲೆ ಹಾರಿ, ಉಗುಳಿ, ಚೆನ್ನಾಗಿ ಪರಚಿಬಿಟ್ಟಿತು. ಇದರಿಂದ ಅವನಿಗೆ ತಡೆಯಲಾರದಷ್ಟು ಭಯವಾಯಿತು. ಅವನು ಹಿಂದಿನ ಬಾಗಿಲಿಗೆ ಓಡಿದ. ಅಲ್ಲಿ ನಾಯಿ ನೆಗೆದು ಅವನ ಕಾಲನ್ನು ಕಚ್ಚಿತು. ಅವನು ಹಿತ್ತಲನ್ನು ದಾಟಿ ಓಡಿ ಹೋಗುತ್ತಿದ್ದಾಗ ಕತ್ತೆ ಅವನನ್ನು ಝಾಡಿಸಿ ಒದೆಯಿತು. ಈ ಗಲಭೆಯಿಂದ ಎಚ್ಚತ್ತ ಹುಂಜ ತನ್ನ ಶಕ್ತಿ ಇದ್ದಷ್ಟೂ ಬಲವಾಗಿ ಕಿರಿಚಿಕೊಂಡಿತು. ಇದನ್ನು ಕೇಳಿ ಆ ಕಳ್ಳ ಎದ್ದೆನೋ ಬಿದ್ದೆನೋ ಎನ್ನುವುದನ್ನೂ ನೋಡದೆ ಸ್ನೇಹಿತರ ಬಳಿಗೆ ಓಡಿಹೋದ.

ಕಳ್ಳರೆಲ್ಲಾ "ಏನು ಸಮಾಚಾರ ? ಏನು ಸಮಾಚಾರ ? ಬೇಗ ಹೇಳು ! ಬೇಗ ಹೇಳು !" ಎಂದು ಕೂಗಿಕೊಂಡರು.

ಅವನು "ನಮ್ಮ ಮನೆಯಲ್ಲಿ ಒಬ್ಬ ಭಯಂಕರಳಾದ ಮಾಟಗಾತಿ ಸೇರಿಕೊಂಡಿದ್ದಾಳೆ. ಅವಳು ನನ್ನ ಮೇಲೆ ಉಗುಳಿ ನನ್ನ ಮುಖವನ್ನು ತನ್ನ ಉದ್ದವಾದ ಬೆರಳುಗಳಿಂದ ಪರಚಿದಳು. ಒಬ್ಬ ಮನುಷ್ಯ ಕೈಯಲ್ಲಿ ಚೂರಿ ಹಿಡಿದು ಬಾಗಿಲ ಹಿಂದೆ ನಿಂತಿದ್ದ. ಅವನು

ನನ್ನ ಕಾಲನ್ನು ತಿವಿದ. ಒಂದು ಕಪ್ಪನೆಯ ಭೂತ ಅಂಗಳದಲ್ಲಿ ನಿಂತು ಗದೆಯಿಂದ ನನ್ನನ್ನು ಹೊಡೆಯಿತು. ಒಂದು ದೆವ್ವ ಮನೆಯ ಮೇಲೆ ಕುಳಿತು "ಆ ಕಳ್ಳನನ್ನು ಇಲ್ಲಿಗೆ ಎಸೆಯಿರಿ! ಇಲ್ಲಿಗೆ ಎಸೆಯಿರಿ! ಎಂದು ಕೂಗಿಕೊಳ್ಳುತ್ತಿತ್ತು" ಎಂದು ಹೆದರಿಕೆಯಿಂದ ತಡೆದು ತಡೆದು ಹೇಳಿದ.

ಇದಾದ ನಂತರ ಕಳ್ಳರಿಗೆ ಆ ಮನೆಗೆ ಹೋಗಲು ಧೈರ್ಯವೇ ಇರಲಿಲ್ಲ. ಆದರೆ ನಮ್ಮ ಸಂಗೀತಗಾರರಿಗೆ ಮಾತ್ರ ತಮ್ಮ ಹೊಸ ಮನೆ ಬಹಳ ಅಚ್ಚುಮೆಚ್ಚಾಗಿ ಕಂಡಿತು. ಅವರು ಅಲ್ಲೇ ಇದ್ದು ಕೊಂಡು ತಮ್ಮದೇ ಒಂದು ಸಂಸಾರ ಹೂಡಬೇಕೆಂದು ನಿಶ್ಚಯಿಸಿ ದರು. ಈಗಲೂ ಅವರು ಅಲ್ಲೇ ಇದ್ದಾರೆ. ಹೋಗಿ ನೋಡಿಕೊಂಡು ಬನ್ನಿ.

# ಬಂಗಾರದ ಬೆಟ್ಟದ ರಾಜ

ಒಬ್ಬ ವರ್ತಕನಿಗೆ ಇಬ್ಬರು ಮಕ್ಕಳಿದ್ದರು. ಒಂದು ಗಂಡು, ಇನ್ನೊಂದು ಹೆಣ್ಣು. ಇಬ್ಬರೂ ಬಹಳ ಸಣ್ಣವರು. ಅವರಿಗೆ ಇನ್ನೂ ಸರಿಯಾಗಿ ಓಡಾಡಲು ಕೂಡ ಬರುತ್ತಿರಲಿಲ್ಲ.

ಆ ವರ್ತಕ ದೂರದ ದೇಶಗಳೊಡನೆ ವ್ಯಾಪಾರ ಮಾಡುತ್ತಿದ್ದ. ಒಮ್ಮೆ ತನ್ನಲ್ಲಿದ್ದ ಪದಾರ್ಥಗಳನ್ನೆಲ್ಲಾ ಎರಡು ದೊಡ್ಡ ಹಡಗುಗಳಲ್ಲಿ ತುಂಬಿ ಪರದೇಶಗಳಿಗೆಂದು ಸಮುದ್ರದ ಮೇಲೆ ಕಳುಹಿಸಿಕೊಟ್ಟ.

ಏಳೆಂಟು ದಿನ ಕಳೆದಿರಲಿಲ್ಲ. ಹಡುಗುಗಳೆರಡೂ ಸಮುದ್ರದಲ್ಲಿ ತೇಲಿಹೋದವೆಂಬ ವರ್ತಮಾನ ಬಂತು. ಇದರ ಫಲವಾಗಿ ಶ್ರೀಮಂತನಾಗಿದ್ದ ಆ ವ್ಯಾಪಾರಿ ಒಮ್ಮೆಗೇ ಕೇವಲ ಬಡವನಾದ. ಒಂದು ಸಣ್ಣ ಹೊಲದ ಹೊರತು ಅವನಿಗೆ ಇನ್ನೇನೂ ಉಳಿಯಲಿಲ್ಲ. ಮನಸ್ಸಿನ ಚಿಂತೆಯನ್ನು ಸ್ವಲ್ಪಮಟ್ಟಿಗಾದರೂ ಕಡಿಮೆ ಮಾಡಿಕೊಳ್ಳಲು ಆಗಾಗ ಈ ಹೊಲದಲ್ಲಿ ಓಡಾಡುವುದು ಅವನ ಅಭ್ಯಾಸವಾಗಿತ್ತು.

ಒಂದು ದಿನ ಅವನು ಎಂದಿನಂತೆ ಓಡಾಡುತ್ತಿದ್ದ. ಒರಟು ಒರಟಾಗಿ ಕಾಣುತ್ತಿದ್ದ ಪುಟ್ಟ ಕುಳ್ಳನೊಬ್ಬ ಎಲ್ಲಿಂದಲೋ ಅವನ ಎದುರಿಗೆ ಬಂದುನಿಂತು "ಏಕೆ ಹೀಗೆ ವ್ಯಸನಪಡುತ್ತಿರುವೆ? ನಿನ್ನ ಮನಸ್ಸಿನಲ್ಲಿ ಏನು ಚಿಂತೆಯಿದೆ?" ಎಂದು ಕೇಳಿದ.

ವರ್ತಕ "ನಿನಗೆ ಅದನ್ನೆಲ್ಲಾ ಹೇಳಿ ಫಲವೇನು? ನಿನ್ನಿಂದ ನನಗೆ ಏನಾದರೂ ಸಹಾಯವಾಗುವ ಹಾಗಿದ್ದರೆ ಹೇಳಬಹುದು. ಇಲ್ಲದಿದ್ದರೆ ಸುಮ್ಮನೆ ಗಂಟಲನ್ನೇಕೆ ಒಣಗಿಸಿಕೊಳ್ಳುವುದು?" ಎಂದು ಬಿಟ್ಟ.

ಕುಳ್ಳ "ಯಾರು ಬಲ್ಲರು? ವಿಚಾರವೇನೆಂದು ಮೊದಲು ಹೇಳು, ಆಮೇಲೆ ನಾನೂ ಸಹಾಯ ಮಾಡಬಹುದು!" ಎಂದ.

ಆಗ ವರ್ತಕ ತನ್ನ ಐಶ್ವರ್ಯವೆಲ್ಲಾ ಹೇಗೆ ನೀರಿನ ಪಾಲಾಗಿತ್ತೆಂದೂ, ಹೇಗೆ ತನಗೆ ಆ ಸಣ್ಣ ಹೊಲವನ್ನು ಬಿಟ್ಟರೆ ಬೇರೆ ಯಾವ ಆಸ್ತಿಯೂ ಇಲ್ಲದಂತಾಗಿತ್ತೆಂದೂ ಅವನಿಗೆ ತಿಳಿಸಿದ.

ಕುಳ್ಳ "ಅಷ್ಟೇತಾನೆ! ಅದಕ್ಕೇಕೆ ಇಷ್ಟೊಂದು ಚಿಂತಿಸುತ್ತಿರುವೆ? ನಾನು ಕೇಳುವುದನ್ನು ಕೊಡುವುದಾದರೆ ನಿನಗೆ ಬೇಕಾದಷ್ಟು ಬಂಗಾರ ದೊರೆಯುವಂತೆ ಮಾಡುತ್ತೇನೆ" ಎಂದ.

ವರ್ತಕ "ಏನು ಕೊಡಬೇಕು?" ಎಂದು ಕೇಳಿದ.

ಕುಳ್ಳ "ನೀನು ಇಲ್ಲಿಂದ ಮನೆಗೆ ಹಿಂದಿರುಗಿ ಹೋದಾಗ ಯಾವ ವಸ್ತು ಮೊದಲು ನಿನ್ನ ಕಣ್ಣಿಗೆ ಬೀಳುತ್ತದೆಯೋ ಆ ವಸ್ತುವನ್ನು ಇನ್ನು ಹನ್ನೆರಡು ವರುಷಗಳಾದ ನಂತರ ನನಗೆ ತಂದು ಕೊಡಬೇಕು" ಎಂದ.

ವರ್ತಕ ಒಂದೆರಡು-ನಿಮಿಷ ಯೋಚಿಸಿದ. "ಮನೆಗೆ ಹೋದ ಕೂಡಲೆ ನನ್ನ ಕಣ್ಣಿಗೆ ಬೀಳುವುದು ಇನ್ನೇನು? ನಾಯಿಯೋ ಬೆಕ್ಕೋ ಎದುರಿಗೆ ಬರುತ್ತದೆ!" ಎಂದುಕೊಂಡ. ಅವನಿಗೆ ಆಗ ತನ್ನ ಮಕ್ಕಳ ನೆನಪೇ ಬರಲಿಲ್ಲ. ಆದ್ದರಿಂದ ಕುಳ್ಳ ಕೇಳಿದ್ದುದಕ್ಕೆ ಒಪ್ಪಿಕೊಂಡು ಅವನು ಮನೆಯ ಕಡೆಗೆ ನಡೆದ.

ವರ್ತಕ ಮನೆಗೆ ಇನ್ನೂ ಸ್ವಲ್ಪ ದೂರದಲ್ಲಿ ಬರುತ್ತಿದ್ದಂತೆಯೇ ಅವನ ಮಗ ಅಪ್ಪನನ್ನು ನೋಡಿ, ಅವನಿಗೆ ಕಾಣದಂತೆ ಮೆಲ್ಲನೆ ಹೇಗೋ ಹಿಂದುಗಡೆಯಿಂದ ಬಂದು, ಅವನ ಎರಡು ಕಾಲುಗಳನ್ನೂ ಬಲವಾಗಿ ಹಿಡಿದುಕೊಂಡ. ಅವನನ್ನು ನೋಡಿದ್ದೇ ತಡ ವರ್ತಕನಿಗೆ "ಅಯ್ಯೋ! ನಾನು ಕುಳ್ಳನಿಗೆ ಎಂಥ ಅವಿವೇಕದ ಮಾತು ಕೊಟ್ಟೆ! ಎನ್ನಿಸಿತು. ಅವನ ಎದೆ ಡವಡವ ಹೊಡೆದುಕೊಂಡಿತು. ಮೈಯೆಲ್ಲಾ ತರತರ ನಡುಗಿತು. ಆದರೆ ಮನೆಗೆ ಹೋಗಿ ನೋಡಲು ಅಲ್ಲಿ ಬಂಗಾರ ಕಂಡು ಬರಲಿಲ್ಲ. ಆದ್ದರಿಂದ ಕುಳ್ಳ ಹೇಳಿದ್ದುದೆಲ್ಲಾ ಸುಳ್ಳೆಂದೂ ಅವನು ಎಲ್ಲೋ ಹಾಸ್ಯ ಮಾಡಿರಬೇಕೆಂದೂ ಭಾವಿಸಿ ಸುಮ್ಮನಾದ.

ಒಂದು ತಿಂಗಳಾಯಿತು. ವರ್ತಕನಿಗೆ ಕೈಯಲ್ಲಿ ಕಾಸಿರಲಿಲ್ಲ. ಮನೆಯ ಅಟ್ಟದ ಮೇಲೆ ಹಳೆಯ ಕಬ್ಬಿಣದ ಸಾಮಾನು ಕೆಲವಿದ್ದವು ಅವನ್ನಾದರೂ ಮಾರಿ ಬಂದಷ್ಟು ದುಡ್ಡು ಸಂಪಾದಿಸಬೇಕೆಂದು ಯೋಚಿಸಿ, ಅವನು ಏಣಿ ಹತ್ತಿ ಹೋದ. ಅಲ್ಲಿ ನೋಡುತ್ತಾನೆ— ನೆಲದ ಮೇಲೆ ಒಂದು ದೊಡ್ಡ ಬಂಗಾರದ ರಾಶಿಯೇ ಇತ್ತು. ಅದನ್ನು ನೋಡಿದ ಕೂಡಲೆ ಅವನ ಸಂತೋಷ ಉಕ್ಕಿತು. ಅವನು ಆ ಹಣ ವನ್ನು ಉಪಯೋಗಿಸಿ ಮತ್ತೆ ವ್ಯಾಪಾರಕ್ಕೆ ಆರಂಭಿಸಿದ. ಸ್ವಲ್ಪ ಕಾಲದಲ್ಲೇ ಮೊದಲಿಗಿಂತಲೂ ದೊಡ್ಡ ಸಾಹುಕಾರನಾದ.

ಇದೆಲ್ಲಾ ನಡೆಯುತ್ತಿದ್ದಾಗ ಅವನ ಮಗನ ವಯಸ್ಸೂ ಬೆಳೆಯು ತ್ತಿತ್ತು. ಹಾಗೆಯೇ ಹನ್ನೆರಡು ವರುಷಗಳು ಕಳೆದು ಹೋದವು. ಹನ್ನೆರಡನೆಯ ವರುಷ ಮುಗಿಯುತ್ತಾ ಬಂದಾಗ ವರ್ತಕನ ಮನಸ್ಸಿ ನಲ್ಲಿ ಕಳವಳ ಮೊದಲಾಯಿತು. ಮತ್ತೆ ಚಿಂತೆ ಶುರುವಾಯಿತು. ವ್ಯಸನವೂ ಯೋಚನೆಯೂ ಅವನ ಮುಖದ ಮೇಲೆ ಮೂಡಿ ಕಾಣು ತ್ತಿದ್ದವು. ಮಗ "ಹೀಗೇಕಿರುವೆ ?" ಎಂದು ಅಪ್ಪನನ್ನು ಕೇಳಿದ. ಒಂದೆರಡು ದಿನ ವರ್ತಕ ಸರಿಯಾದ ಉತ್ತರ ಕೊಡಲಿಲ್ಲ. ಕಡೆಗೆ "ನೀನು ಮಗುವಾಗಿದ್ದಾಗ ನಾನು ನಿನ್ನನ್ನು ನಿನಗೇ ಗೊತ್ತಿಲ್ಲದಂತೆ ಕುರೂಪಿಯಾದ ಕುಳ್ಳನೊಬ್ಬನಿಗೆ ಬಂಗಾರದ ಆಸೆಗಾಗಿ ಮಾರಿಬಿಟ್ಟೆ. ಈಗ ಹನ್ನೆರಡು ವರುಷಗಳು ಮುಗಿಯುತ್ತಾ ಬಂದಿವೆ. ನಾನು ಒಪ್ಪಂದದ ಪ್ರಕಾರ ನಡೆದುಕೊಳ್ಳಬೇಕು" ಎಂದು ಹೇಳಿದ.

ಮಗ "ಅಪ್ಪ, ಇಷ್ಟಕ್ಕೆಲ್ಲಾ ನೀನೇಕೆ ಯೋಚಿಸುತ್ತೀಯ ! ನಾನು ಆ ಕುಳ್ಳನ ಕೈಗೆ ಸಿಕ್ಕುತ್ತೇನೆಯೆ ? ಅವನನ್ನು ಬೆದರಿಸಿ ಓಡಿಸಿ ಬಿಡುತ್ತೇನೆ !" ಎಂದ.

ಹನ್ನೆರಡನೆಯ ವರುಷ ಕೊನೆಗಂಡ ಕೂಡಲೆ ಅವರಿಬ್ಬರೂ ಕುಳ್ಳನನ್ನು ಕಾಣಲು ಗೊತ್ತಾಗಿದ್ದ ಸ್ಥಳಕ್ಕೆ ಹೋದರು. ಮಗ ನೆಲದ ಮೇಲೆ ಗುಂಡಗೆ ಒಂದು ಗೆರೆ ಎಳೆದ. ತಂದೆ ಮಕ್ಕಳಿಬ್ಬರೂ ಅದರ ನಡುವೆ ಕುಳಿತರು.

ಸ್ವಲ್ಪ ಹೊತ್ತಿನಲ್ಲೇ ಕುಳ್ಳ ಬಂದು "ನೀನು ಮಾತು ಕೊಟ್ಟಿದ್ದಂತೆ ನನಗೆ ಸೇರಬೇಕಾದ ವಸ್ತುವನ್ನು ತಂದಿರುವೆಯಾ ?" ಎಂದು ವರ್ತಕನನ್ನು ಕೇಳಿದ. ಪಾಪ! ವರ್ತಕನ ಬಾಯಿಂದ ಮಾತೇ ಹೊರಡಲಿಲ್ಲ.

ಅಪ್ಪನ ಪರವಾಗಿ ಮಗ "ಏನಯ್ಯಾ ಬೇಕು ನಿನಗೆ ?" ಎಂದ.

ಕುಳ್ಳ "ನಾನು ಇಲ್ಲಿಗೆ ಬಂದಿರುವುದು ನಿಮ್ಮ ಅಪ್ಪನ ಜೊತೆಯಲ್ಲಿ ಮಾತಾಡುವುದಕ್ಕೆ, ನಿನ್ನ ಜೊತೆಯಲ್ಲಲ್ಲ !" ಎಂದ.

ಅದಕ್ಕೆ ಹುಡುಗ "ನೀನು ನಮ್ಮ ಅಪ್ಪನಿಗೆ ಸುಳ್ಳುಹೇಳಿ ಮೋಸಗೊಳಿಸಿರುವೆ. ಅವನನ್ನು ಒಪ್ಪಂದದಿಂದ ಬಿಡುಗಡೆ ಮಾಡು" ಎಂದ.

ಕುಳ್ಳ "ಇಲ್ಲ ! ನನ್ನ ಹಕ್ಕನ್ನು ನಾನು ಖಂಡಿತ ಬಿಟ್ಟುಕೊಡುವುದಿಲ್ಲ !" ಎಂದುಬಿಟ್ಟ.

ದೊಡ್ಡ ಚರ್ಚೆಗೆ ಪ್ರಾರಂಭವಾಯಿತು. ಕೊನೆಗೆ ಹುಡುಗನನ್ನು ಅಲ್ಲೇ ಹತ್ತಿರದಲ್ಲಿದ್ದ ವಿಶಾಲವಾದ ಕೊಳದ ಮೇಲೆ ತೇಲುತ್ತಿದ್ದ ದೋಣಿಯಲ್ಲಿ ಕೂಡಿಸಬೇಕೆಂದೂ, ಅವನ ತಂದೆ (ವರ್ತಕ) ತನ್ನ ಕೈಯಿಂದಲೇ ಆ ದೋಣಿಯನ್ನು ನಡುನೀರಿಗೆ ನೂಕಬೇಕೆಂದೂ ತೀರ್ಮಾನವಾಯಿತು.

ಹುಡುಗ ಅಪ್ಪನಿಗೆ ಅಡ್ಡಬಿದ್ದು ಆಶೀರ್ವಾದ ಪಡೆದು ದೋಣಿಯಲ್ಲಿ ಹೋಗಿ ಕುಳಿತ. ವರ್ತಕ ದುಃಖವನ್ನು ತಡೆಯಲಾರದೆ ಕಣ್ಣುಮುಚ್ಚಿಕೊಂಡು ಅದನ್ನು ಬಲವಾಗಿ ನೂಕಿದ. ನೂಕಿದ ಕೂಡಲೆ ಅದು ಒಂದು ಮಗ್ಗುಲಿಗೆ ಹೊರಳಿಬಿಟ್ಟಿತು. ಪಾಪ! ವರ್ತಕ ತನ್ನ ಮಗ ನೀರಿನಲ್ಲಿ ಮುಳುಗಿಹೋದನೆಂದು ತಿಳಿದು, ತಿರುಗಿನೋಡದೆ ಅಳುತ್ತ, ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ನಿಧಾನವಾಗಿ ಮನೆಗೆ ನಡೆದ.

ಆದರೆ ದೋಣಿ ಮಗ್ಗುಲಿಗೆ ಹೊರಳಿದರೂ ಮುಳುಗಲಿಲ್ಲ. ಮುಂದುಮುಂದಕ್ಕೆ ಮೆಲ್ಲನೆ ತೇಲಿಕೊಂಡು ಹೋಯಿತು. ಕಡೆಗೆ ಅದು ಯಾವುದೋ ಯಾರೂ ಕಂಡರಿಯದ ನಾಡಿನ ತೀರಕ್ಕೆ ಬಂದು

ನಿಂತಿತು. ಅಲ್ಲಿಯವರೆಗೂ ಹುಡುಗ ಯಾವ ಅಪಾಯಕ್ಕೂ ಗುರಿ ಯಾಗದೆ ಒಳಗಡೆಯೇ ಕುಳಿತಿದ್ದ. ದೋಣಿ ದಡ ಸೇರಿದೊಡನೆ ಅವನು ಹೊರಕ್ಕೆ ಹಾರಿ ನಿಂತ.

ಅವನ ಎದುರಿಗೆ ಸೊಗಸಾದ ಒಂದು ಅರಮನೆ ಇತ್ತು. ಆದರೆ ಅದರ ಒಳಗಡೆ ಒಂದು ನೊಣ ಕೂಡ ಇರಲಿಲ್ಲ. ಏಕೆಂದರೆ ಆ ಅರಮನೆಯೆಲ್ಲಾ ಯಾರದೋ ಶಾಪಕ್ಕೆ ಒಳಗಾಗಿತ್ತು. ಅಲ್ಲಿ ಇಲ್ಲಿ ಸುತ್ತಿ ಅವನು ಕಡೆಗೆ ಒಂದು ಕೋಣೆಗೆ ಬಂದ. ಅಲ್ಲಿ ಮಾತ್ರ ಒಂದು ಬಿಳಿಯ ಹಾವು ಮಲಗಿತ್ತು.

ಈ ಹಾವು ಹಿಂದೆ ಒಂದು ರಾಜನ ಮಗಳಾಗಿತ್ತು. ಶಾಪದಿಂದ ರಾಜನ ಮಗಳು ಹೀಗೆ ಹಾವಾಗಿದ್ದಳು. ಅವನನ್ನು ನೋಡಿದ ಕೂಡಲೆ ಅವಳಿಗೆ ಬಹಳ ಸಂತೋಷವಾಯಿತು. ಅವಳು "ಬಂದೆಯಾ ಮಹರಾಯ! ಇಷ್ಟು ದಿನ ಆದಮೇಲೆ ನನ್ನನ್ನು ಬಿಡು ಗಡೆ ಮಾಡಲು ಈಗಲಾದರೂ ಬಂದೆಯಲ್ಲ! ನಿನಗೋಸ್ಕರ ಹನ್ನೆ ರಡು ವರುಷಗಳಿಂದಲೂ ಕಾದಿದ್ದೇನೆ. ನಿನ್ನ ಹೊರತು ನನ್ನನ್ನು ಈ ಮಾಯೆಯಿಂದ ಬಿಡಿಸಲು ಇನ್ನಾರಿಗೂ ಸಾಧ್ಯವಿಲ್ಲ. ಈ ದಿವಸ ರಾತ್ರಿ ಹನ್ನೆರಡು ಜನ ಇಲ್ಲಿಗೆ ಬರುತ್ತಾರೆ. ಅವರ ಮುಖಗಳೆಲ್ಲಾ ಕಪ್ಪಗಿರುತ್ತವೆ. ಅವರ ದೇಹಗಳ ಸುತ್ತಲೂ ಸರಪಣಿಗಳು ತೂಗಾ ಡುತ್ತಿರುತ್ತವೆ. ಅವರು ನಿನ್ನನ್ನು "ಇಲ್ಲೇನು ಮಾಡುತ್ತಿರುವೆ?" ಎಂದು ಕೇಳುತ್ತಾರೆ. ಆದರೆ ನೀನು ಮಾತ್ರ ಬಾಯಿ ಬಿಡಕೂಡದು. ಅವರು ಏನು ಕೇಳಿದರೂ ಉತ್ತರ ಕೊಡ ಕೂಡದು. ಬೇಕಾದದ್ದು ಮಾಡಲಿ, ಹೊಡೆಯಲಿ, ಬಡಿಯಲಿ, ಎಷ್ಟೇ ವಿಧವಾಗಿ ತೊಂದರೆ ಕೊಡಲಿ, ಎಲ್ಲವನ್ನೂ ಮಾತಾಡದೆ ಸಹಿಸಿಕೊಂಡಿರು. ಹನ್ನೆರಡು ಗಂಟೆಗೆ ಅವರು ಹೊರಟು ಹೋಗಲೇ ಬೇಕು. ನಾಳೆ ರಾತ್ರಿ ಮತ್ತೆ ಹನ್ನೆರಡು ಮಂದಿ ಬರುವರು. ನಾಡಿದ್ದು ರಾತ್ರಿ ಇಪ್ಪತ್ತು ನಾಲ್ಕು ಜನ ಬರುವರು. ಅವರು ನಿನ್ನ ಕುತ್ತಿಗೆಯನ್ನೇ ಕತ್ತರಿಸಿ ಹಾಕುತ್ತಾರೆ. ಆದರೂ ತುಟಿಪಿಟಕ್ಕೆನ್ನದಿರು. ನಾಡಿದ್ದು ರಾತ್ರಿ ಹನ್ನೆರಡು ಗಂಟೆಗೆ ಅವರ ಶಕ್ತಿಯೆಲ್ಲಾ ಮಾಯವಾಗುತ್ತದೆ. ಆಗ ನನಗೆ ಬಿಡುಗಡೆ

ಯಾಗುತ್ತದೆ. ನನ್ನ ಹತ್ತಿರ ಸತ್ತವರನ್ನು ಬದುಕಿಸುವ ಪ್ರಾಣಜಲ ವಿದೆ. ಅದನ್ನು ತಂದು ಅದರಿಂದ ನಿನ್ನ ಮೈ ತೊಳೆಯುತ್ತೇನೆ. ಮತ್ತೆ ನಿನಗೆ ಜೀವ ಬರುತ್ತದೆ" ಎಂದು ಹೇಳಿದಳು.

ಎಲ್ಲವೂ ಅವಳು ಹೇಳಿದಂತೆಯೇ ನಡೆಯಿತು. ವರ್ತಕನ ಮಗ ಒಂದು ಮಾತನ್ನೂ ಆಡಲಿಲ್ಲ. ಮೂರನೆಯ ರಾತ್ರಿ ರಾಜ ಕುಮಾರಿ ಬಂದು ಅವನನ್ನು ಬದುಕಿಸಿ ಅವನ ಕತ್ತಿನ ಮೇಲೆ ಕೈಬೀಸಿ ಅವನನ್ನು ತಬ್ಬಿಕೊಂಡು ಮುದ್ದಾಡಿದಳು. ಅದೇ ಕ್ಷಣವೇ ಅರಮನೆಯಲ್ಲೆಲ್ಲಾ ಆನಂದ ತುಂಬಿಹೋಯಿತು. ಅವರಿಬ್ಬರಿಗೂ ವೈಭವದಿಂದ ಮದುವೆಯಾಯಿತು. ಆ ಸ್ಥಳಕ್ಕೆ ಬಂಗಾರದ ಬೆಟ್ಟ ವೆಂದು ಹೆಸರು. ವರ್ತಕನ ಮಗ ಬಂಗಾರದ ಬೆಟ್ಟಕ್ಕೆ ಒಡೆಯನಾದ.

ಅವರಿಬ್ಬರೂ ಬಹಳ ಸುಖದಿಂದಿದ್ದರು. ರಾಣಿಗೆ ಒಬ್ಬ ಮಗ ಹುಟ್ಟಿದ. ಹೀಗೆಯೇ ಎಂಟು ವರುಷ ಕಳೆದು ಹೋದವು.

ಆಗ ರಾಜನಿಗೆ ತಂದೆಯು ನೆನಪಾಯಿತು. ಅವನನ್ನು ನೋಡ-ಬೇಕೆಂಬ ಆಸೆ ಬಲವಾಯಿತು. ರಾಣಿ ಅವನು ಹೋಗಕೂಡದೆಂದು ತಡೆದಳು. "ನೀನು ಅಲ್ಲಿಗೆ ಹೋದರೆ ಕೇಡು ಸಂಭವಿಸುವುದು. ಖಂಡಿತ; ಹೋಗಬೇಡ" ಎಂದು ಹಟ ಹಿಡಿದಳು. ಆದರೆ ಅವಳು ಒಪ್ಪಿಗೆ ಕೊಡುವವರೆಗೂ ಅವನು ಬಿಡಲಿಲ್ಲ.

ಅವನು ಹೊರಡುವಾಗ ಅವಳು ಅವನಿಗೆ ಒಂದು ಉಂಗುರ-ವನ್ನು ಕೊಟ್ಟು, "ಇದನ್ನು ನಿನ್ನ ಬೆರಳಿಗೆ ಇಟ್ಟುಕೊ. ಇದರ ಸಹಾಯದಿಂದ ನಿನಗೆ ಬೇಕಾದುದೆಲ್ಲಾ ಲಭಿಸುತ್ತದೆ. ಆದರೆ ನನ್ನನ್ನು ನಿಮ್ಮ ತಂದೆಯ ಮನೆಗೆ ಕರೆಸಿಕೊಳ್ಳುವುದಕ್ಕೆ ಮಾತ್ರ ನೀನು ಇದನ್ನು ಉಪಯೋಗಿಸ ಕೂಡದು. ಹಾಗೆಂದು ಮಾತು ಕೊಡು" ಎಂದು ಹೇಳಿದಳು.

ಅವನು ಅವಳು ಕೇಳಿದಂತೆ ಪ್ರತಿಜ್ಞೆಮಾಡಿ, ಉಂಗುರವನ್ನು ಬೆರಳಿಗೆ ಸಿಕ್ಕಿಸಿಕೊಂಡು "ನಮ್ಮ ಅಪ್ಪನ ಮನೆಗೆ ಹೋಗಬೇಕು" ಎಂದುಕೊಂಡ. ಕ್ಷಣ ಮಾತ್ರದಲ್ಲೇ ಉಂಗುರ ಅವನನ್ನು ಅವರ ಅಪ್ಪನ ಮನೆಗೆ ಕರೆದೊಯ್ದಿತು.

ಅವನ ವಿಚಿತ್ರವಾದ ವಿದೇಶದ ಉಡುಪನ್ನು ನೋಡಿ ಕಾವಲುಗಾರ ಅವನನ್ನು ಒಳಕ್ಕೆ ಬಿಡಲಿಲ್ಲ. ಆದ್ದರಿಂದ ಅವನು ಊರಿನ ಆಚೆ ಇದ್ದ ಒಂದು ಬೆಟ್ಟಕ್ಕೆ ಹೋಗಿ, ಅಲ್ಲಿ ವಾಸಮಾಡುತ್ತಿದ್ದ ಕುರುಬನೊಬ್ಬನ ಹಳೆಯ ಅಂಗಿಯನ್ನು ಎರವಲಾಗಿ ತಂದ. ಅದನ್ನು ತೊಟ್ಟಿದ್ದಾಗ ಅವನನ್ನು ಗುರುತು ಹಿಡಿಯಲು ಯಾರಿಗೂ ಆಗುತ್ತಿರಲಿಲ್ಲ.

ಹೀಗೆ ಅವನು ವರ್ತಕನ ಮನೆಗೆ ಮತ್ತೆ ಬಂದು, ತಾನು ಅವನ ಮಗನೆಂದು ಹೇಳಿದ.

ವರ್ತಕ ಈ ಮಾತನ್ನು ನಂಬಲಿಲ್ಲ. "ನನಗೆ ಇದ್ದವನು ಒಬ್ಬನೇ ಒಬ್ಬ ಮಗ. ಆ ಮಗ ಸತ್ತು ಹೋಗಿ ಎಷ್ಟೋ ವರುಷಗಳಾದವು" ಎಂದುಬಿಟ್ಟ. ಅವನು ಬಡ ಕುರುಬನ ಹಾಗೆ ಬಟ್ಟೆಗಳನ್ನು ತೊಟ್ಟಿದ್ದುದರಿಂದ ಅವನನ್ನು ಆದರಿಸಿ ಊಟಕ್ಕೆ ಕೂಡ ಕರೆಯಲಿಲ್ಲ. ರಾಜನಾದರೋ ತಾನು ವರ್ತಕನ ಮಗನೆಂದು ಒತ್ತಿ ಒತ್ತಿ ಮತ್ತೆ ಮತ್ತೆ ಹೇಳಿದ. "ನಾನು ನಿಮ್ಮ ಮಗನೇ ಹೌದೋ ಅಲ್ಲವೋ ಎಂಬುದನ್ನು ತಿಳಿದು ಕೊಳ್ಳಲು ಯಾವ ಗುರುತೂ ಇಲ್ಲವೇ ?" ಎಂದು ಕೇಳಿದ.

ಅವನ ತಾಯಿ "ಗುರುತಿಲ್ಲದೆ ಏನು ? ನಮ್ಮ ಹುಡುಗನ ಬಲ ತೋಳಿನ ಕೆಳಭಾಗದಲ್ಲಿ ಮಾವಿನ ಕಾಯಿನ ಹಾಗೆ ಕರಿಯ ಬಣ್ಣದ ಒಂದು ಮಚ್ಚೆಯಿದೆ" ಎಂದಳು.

ಆಗ ಅವನು ಅವರಿಗೆ ಆ ಗುರುತನ್ನು ತೋರಿಸಿದ. ಅವನು ಅದುವರೆಗೂ ಹೇಳಿದ್ದುದೆಲ್ಲಾ ನಿಜವೆಂದು ಅವರಿಗೆ ತೃಪ್ತಿಯಾಯಿತು. ಅನಂತರ ಅವನು ತಾನು ಬಂಗಾರದ ಬೆಟ್ಟದ ರಾಜನೆಂದೂ, ತನ್ನ ಹೆಂಡತಿ ಒಬ್ಬ ರಾಜನ ಮಗಳೆಂದೂ, ತನಗೊಬ್ಬ ಮಗನಿರುವನೆಂದೂ ಹೇಳಿದ.

ವರ್ತಕ "ಎಂದಿಗೂ ಇರಲಾರದು. ಕುರುಬನ ಕೊಪ್ಪಾಳೆ ಹೊದ್ದುಕೊಂಡು ಅಲೆದಾಡುವವನು ನೀನೆಂಥ ರಾಜನಪ್ಪ !" ಎಂದು ಹಾಸ್ಯಮಾಡಿದ.

ಇದನ್ನು ಕೇಳಿ ರಾಜನಿಗೆ ಬಹಳ ಕೋಪಬಂತು. ಅವನು ರಾಣಿಗೆ ತಾನು ಕೊಟ್ಟಿದ್ದ ಭಾಷೆಯನ್ನು ಮರೆತುಬಿಟ್ಟು ಬೆರಳಿನಲ್ಲಿದ್ದ ಉಂಗುರವನ್ನು ತಿರುಗಿಸುತ್ತ "ನನ್ನ ರಾಣಿಯೂ ಮಗನೂ ಇಲ್ಲಿಗೆ ಬರಬೇಕು" ಎಂದು ಅಪೇಕ್ಷೆಪಟ್ಟ.

ಕ್ಷಣಮಾತ್ರದಲ್ಲಿ ಅವರು ಅವನ ಎದುರಿಗೆ ಬಂದು ನಿಂತರು. ಆದರೆ ರಾಣಿ ಅತ್ತು ರಂಪಮಾಡಿ, ಅವನು ಕೊಟ್ಟ ಮಾತಿಗೆ ತಪ್ಪಿದನೆಂದೂ ಅದರ ಫಲವಾಗಿ ಕೇಡು ಉಂಟಾಗುವುದು ಖಂಡಿತವೆಂದೂ ಹೇಳಿದಳು. ಅವಳನ್ನು ಸಮಾಧಾನಪಡಿಸಲು ಅವನು ಸರ್ವ ಪ್ರಯತ್ನ ಮಾಡಿದ. ಕಡೆಗೆ ಅವಳಿಗೂ ಸಮಾಧಾನವಾದಂತೆ ಕಂಡು ಬಂತು. ಆದರೆ ನಿಜವಾಗಿಯೂ ಅವಳು ಸಮಾಧಾನ ಹೊಂದಿರಲಿಲ್ಲ. ಅವನ ಮೇಲೆ ಸೇಡು ತೀರಿಸಿಕೊಳ್ಳುವುದು ಹೇಗೆ ಎಂದು ಮನಸ್ಸಿನಲ್ಲೇ ಆಲೋಚಿಸುತ್ತಿದ್ದಳು.

ಒಂದು ದಿನ ಅವನು ಅವಳನ್ನು ಊರ ಹೊರಗಿನ ಬಯಲಿನಲ್ಲಿ ಓಡಾಡಲು ಕರೆದುಕೊಂಡು ಹೋಗಿ, ತನ್ನ ತಂದೆ ತನ್ನನ್ನು ದೋಣಿ-ಯಲ್ಲಿ ಕೂಡಿಸಿ ನಡು ನೀರಿಗೆ ತಳ್ಳಿಬಿಟ್ಟಿದ್ದ ಸ್ಥಳವನ್ನು ಅವಳಿಗೆ ತೋರಿಸಿದ. ಇಬ್ಬರೂ ಅಲ್ಲೇ ಕುಳಿತುಕೊಂಡರು. ಅವನು "ನನಗೇಕೋ ಬಹಳ ಆಯಾಸವಾಗಿದೆ, ನನ್ನ ಹತ್ತಿರ ಬಾ, ನಿನ್ನ ತೊಡೆಯ ಮೇಲೆ ತಲೆಯಿಟ್ಟು ಮಲಗಿ ಸ್ವಲ್ಪ ನಿದ್ದೆ ಮಾಡುತ್ತೇನೆ" ಎಂದ.

ಅವನಿಗೆ ನಿದ್ದೆ ಬಂದುದೇ ತಡ, ಅವಳು ಅವನ ಬೆರಳಿನಲ್ಲಿದ್ದ ಉಂಗುರವನ್ನು ಮೆಲ್ಲನೆ ಎಳೆದುಕೊಂಡು, ಹಾಗೆಯೇ ಹಿಂದಕ್ಕೆ ಸರಿದು ತಾನೂ ತನ್ನ ಮಗನೂ ತಮ್ಮ ರಾಜ್ಯದಲ್ಲಿರಬೇಕೆಂದು ಅಪೇಕ್ಷಿಸಿದಳು.

ರಾಜ ಎಚ್ಚರವಾದಾಗ ನೋಡಲು ತಾನೊಬ್ಬನೇ ಇದ್ದ. ಅವನ ಬೆರಳಿನಲ್ಲಿ ಉಂಗುರ ಇರಲಿಲ್ಲ. ಅವನು "ಇನ್ನು ನಾನು ನಮ್ಮ ಅಪ್ಪನ ಮನೆಗೆ ಹಿಂತಿರುಗಿ ಹೋಗುವುದು ಅಸಾಧ್ಯ. ಮೊದಲೇ ಅನುಮಾನ ಪಡುತ್ತಿದ್ದರು. ಈಗ ಹೋದರೆ ನಾನೊಬ್ಬ ಮಾಟಗಾರನೆಂದು ನಿಂದಿಸಿ ಓಡಿಸಿ ಬಿಡುವರು. ಅಲ್ಲಿಗೆ ಹೋಗುವುದೇ ಬೇಡ.

ಹೀಗೆಯೇ ಅಲೆದಾಡಿ ಮತ್ತೆ ನನ್ನ ರಾಜ್ಯಕ್ಕೆ ಹೋಗಲು ಪ್ರಯತ್ನಿಸು ತ್ತೇನೆ" ಎಂದು ಎದ್ದು ಹೊರಟ.

ಅಲ್ಲಿಂದ ಹೊರಟವನು ಅವನೊಂದು ಕಾಡಿಗೆ ಬಂದ. ಅಲ್ಲಿ ಮೂವರು ರಾಕ್ಷಸರು ತಮ್ಮ ಆಸ್ತಿಯನ್ನು ಹಂಚಿಕೊಳ್ಳುತ್ತಿದ್ದರು. ಆದರೆ ಯಾವ ಪದಾರ್ಥ ಯಾರಿಗೆ ಸೇರಬೇಕೆಂದು ಅವರಲ್ಲಿ ಒಪ್ಪಿಗೆ ಯಾಗುವ ಹಾಗಿರಲಿಲ್ಲ. ಆದ್ದರಿಂದ ಇವನನ್ನು ನೋಡಿದೊಡನೆ ಅವರು ಇವನನ್ನು ಕರೆದರು. "ಈ ಮನುಷ್ಯಕುನ್ನಿಗಳಿಗೆ ನಮ-ಗಿಂತಲೂ ಹೆಚ್ಚು ಬುದ್ಧಿ ಇರುತ್ತದೆ, ಇವನು ನಮಗೆ ಈ ವಸ್ತು ಗಳನ್ನು ಹಂಚಲಿ" ಎಂದರು.

ಅವರಲ್ಲಿದ್ದ ವಸ್ತುಗಳು ಮೂರು. ಮೊದಲನೆಯದು ಒಂದು ಕತ್ತಿ. "ತಲೆಗಳು ತುಂಡಾಗಲಿ" ಎಂದರೆ ಸಾಕು—ಈ ಕತ್ತಿ ಶತ್ರು ವಿನ ತಲೆಯನ್ನು ಕತ್ತರಿಸಿ ಹಾಕುತ್ತಿತ್ತು. ಎರಡನೆಯದು ಒಂದು ನಿಲುವಂಗಿ ಯಾರಾದರೂ ಇದನ್ನು ತೊಟ್ಟುಕೊಂಡರೆ ಅವರು ಇತ ರರ ಕಣ್ಣಿಗೆ ಕಾಣದಂತೆ ಆಗುತ್ತಿದ್ದರು. ಮೂರನೆಯದು ಒಂದು ಜೊತೆ ಜೋಡುಗಳು. ಇವನ್ನು ಮೆಟ್ಟಿಕೊಂಡವನು ತಾನು ಎಲ್ಲಿಗೆ ಹೋಗಬೇಕೆಂದು ಅಪೇಕ್ಷೆಪಟ್ಟರೆ ಅಲ್ಲಿರುತ್ತಿದ್ದ.

ರಾಜ "ಇವನ್ನೆಲ್ಲಾ ನಾನು ಮೊದಲು ಉಪಯೋಗಿಸಿ ಪರೀಕ್ಷಿ ಸಿದರೆ ಇವುಗಳ ಬೆಲೆ ನನಗೆ ತಿಳಿಯುತ್ತದೆ. ಅನಂತರ ಇವನ್ನು ನಿಮಗೆ ಹಂಚಲು ನನಗೆ ಸುಲಭವಾಗುತ್ತದೆ" ಎಂದ.

ಅವರು ಮೊದಲು ನಿಲುವಂಗಿಯನ್ನು ಅವನ ಕೈಗೆ ಕೊಟ್ಟರು. ರಾಜ ಅದನ್ನು ತೊಟ್ಟುಕೊಂಡ ಕೂಡಲೆ ಕಣ್ಣಿಗೆ ಕಾಣದಂತಾದ. "ಅಂಗಿ ಬಹಳ ಚೆನ್ನಾಗಿದೆ. ಎಲ್ಲಿ ಕತ್ತಿಯನ್ನು ಕೊಡಿ" ಎಂದ.

ಅವರು "ಇಲ್ಲ ಅದನ್ನು ನಮ್ಮ ಮೇಲೆ ಬೀಸುವುದಿಲ್ಲವೆಂದು ಆಣೆಯಿಟ್ಟು ಹೇಳಿದ ಹೊರತು ಕೊಡುವುದಿಲ್ಲ. ನೀನೇನಾದರೂ ನಮ್ಮ ಕಡೆಗೆ ತಿರುಗಿ "ತಲೆಗಳು ತುಂಡಾಗಲಿ" ಎಂದರೆ ಸಾಕು ನಾವೆಲ್ಲಾ ಒಂದೇ ಮಾತಿಗೆ ಛಟ್ಟು!" ಎಂದು ಕೂಗಿದರು. ಕಡೆಗೆ ಅವನು ಅದನ್ನು ತಮ್ಮ ಮೇಲೆ ಪ್ರಯೋಗಿಸಕೂಡದೆಂದೂ ಒಂದು

ಮರದ ಮೇಲೆ ಪ್ರಯೋಗಿಸಬೇಕೆಂದೂ ಭಾಷೆ ತೆಗೆದುಕೊಂಡು ಕತ್ತಿಯನ್ನು ಅವನ ಕೈಗೆ ಕೊಟ್ಟರು.

ಅನಂತರ ಅವನು ಜೋಡುಗಳನ್ನು ಕೊಡಬೇಕೆಂದು ಕೇಳಿದ. ಅವೂ ಬಂದವು.

ಈ ಮೂರು ವಸ್ತುಗಳೂ ತನ್ನ ವಶಕ್ಕೆ ಬಂದೊಡನೆಯೇ ಅವನು "ನಾನೀಗ ಬಂಗಾರದ ಬೆಟ್ಟಕ್ಕೆ ಹೋಗಬೇಕು" ಎಂದು-ಕೊಂಡ. ಎಂದುಕೊಂಡಿದ್ದೇ ತಡ, ಅಲ್ಲಿಗೆ ಹೋಗೇಬಿಟ್ಟ! ರಾಕ್ಷಸರು, ಪಾಪ, ಇದ್ದುದನ್ನೆಲ್ಲಾ ಕಳೆದುಕೊಂಡು, ಕಣ್ಣು ಕಣ್ಣು ಬಿಡುತ್ತಾ ನಿಂತರು.

ಅವನು ಬಂಗಾರದ ಬೆಟ್ಟದ ಅರಮನೆಯ ಹತ್ತಿರ ಬಂದಾಗ ಸಂತೋಷವನ್ನು ಸೂಚಿಸುವ ಸಂಗೀತ ಕೇಳಿ ಬಂತು. ಸುತ್ತಲೂ ಇದ್ದ ಜನ ರಾಣಿ ಬೇರೊಬ್ಬ ರಾಜಕುಮಾರನೊಡನೆ ಮದುವೆಯಾಗಲು ಏರ್ಪಾಟು ಮಾಡಿದ್ದಳೆಂದು ಹೇಳಿದರು.

ಆಗ ಅವನು ತಾನು ರಾಕ್ಷಸರಿಂದ ತಂದಿದ್ದ ಅಂಗಿಯನ್ನು ತೊಟ್ಟು, ಯಾರಿಗೂ ಕಾಣದಂತೆ ಅರಮನೆಯನ್ನು ಪ್ರವೇಶಿಸಿ ಹೋಗಿ ರಾಣಿಯ ಮಗ್ಗುಲಲ್ಲೇ ಕುಳಿತುಕೊಂಡ. ಸೇವಕರು ಏನಾದರೂ ಆಹಾರವನ್ನು ತಂದು ಅವಳ ತಟ್ಟೆಯಲ್ಲಿ ಬಡಿಸಿದ ಕೂಡಲೆ ಅವನು ಅದನ್ನು ತೆಗೆದುಕೊಂಡು ತಿಂದುಬಿಡುತ್ತಿದ್ದ, ಒಬ್ಬ ಸೇವಕಿ ಅವಳಿಗೊಂದು ಲೋಟ ಹಾಲು ತಂದುಕೊಟ್ಟಳು. ಅವನು ಅದನ್ನೂ ತೆಗೆದುಕೊಂಡು ಕುಡಿದ. ಹೀಗೆ ರಾಣಿಗೆ ಊಟ ಮಾಡುವುದಕ್ಕೇ ಆಗದೆ ಹೋಯಿತು.

ಇದನ್ನೆಲ್ಲಾ ನೋಡಿದೊಡನೆ ರಾಣಿಗೆ ಹೆದರಿಕೆಯೂ ಪಶ್ಚಾತ್ತಾಪವೂ ಉಂಟಾದವು. ಅವಳು ತನ್ನ ಕೋಣೆಗೆ ಹೋಗಿ ಅಳತೊಡಗಿದಳು. ಆದರೆ ರಾಜ ಅವಳ ಹಿಂದೆಯೇ ಅಲ್ಲಿಗೂ ಹೋದ. ಅವಳು "ಅಯ್ಯೋ! ನನ್ನನ್ನು ಶಾಪದಿಂದ ಬಿಡುಗಡೆ ಮಾಡಿದವನು ಆ ದಿನವೇ ಅನೇಕ ವರುಷಗಳ ಹಿಂದೆಯೇ ಬಂದನಲ್ಲ! ಇನ್ನೂ ಏಕೆ ಹೀಗಾಗುತ್ತಿದೆ?" ಎಂದು ಗೋಳಾಡಿದಳು.

ರಾಜ " ಮೋಸಗಾತಿ ! ನಿನ್ನನ್ನು ಬಿಡುಗಡೆಮಾಡಿದವನು ಬಂದಿದ್ದುದು ನಿಜ, ಈಗಲೂ ಬಂದಿದ್ದಾನೆ. ನಿನ್ನ ಪಕ್ಕದಲ್ಲೇ ಕೂತಿದ್ದಾನೆ. ಅವನು ನಿನಗೆ ಮಾಡಿದ ಉಪಕಾರಕ್ಕೆ ನಿನ್ನ ಪ್ರತ್ಯುಪಕಾರ ಇದೇ ಏನು ? " ಎಂದು ಅವಳನ್ನು ಚೆನ್ನಾಗಿ ಬೈದ. ಅನಂತರ ಹೊರಗೆ ಹೋಗಿ ಅಲ್ಲಿ ನೆರದಿದ್ದವರನ್ನೆಲ್ಲಾ ಓಡಿಸಿಬಿಟ್ಟು " ಮದುವೆ ನಿಂತು ಹೋಯಿತು. ನಿಜವಾದ ರಾಜನಾದ ನಾನು ಹಿಂತಿರುಗಿ ಬಂದಿದ್ದೇನೆ " ಎಂದು ಸಾರಿದ. ಆದರೆ ಅಲ್ಲಿ ಸೇರಿದ್ದ ರಾಜಕುಮಾರರೂ, ಇತರ ದೊಡ್ಡಮನುಷ್ಯರೂ, ಮಂತ್ರಿಗಳೂ ಅವನು ರಾಜನೆಂಬ ಮಾತನ್ನು ನಂಬದೆ ಅವನನ್ನು ಅಣಕಿಸಿ ಕುಚೇಷ್ಟೆ ಮಾಡಿದರು. ಅವನ ಕೋಪ ಮತ್ತಷ್ಟು ಹೆಚ್ಚಿತು. " ಬಾಯಿ ಮುಚ್ಚಿಕೊಂಡು ಹೋಗುವಿರೋ ಇಲ್ಲವೊ ? " ಎಂದು ಗರ್ಜಿಸಿದ. ಅವರು ಅವನನ್ನು ಹಿಡಿದು ಕಟ್ಟಿ ಹಾಕಲು ಪ್ರಯತ್ನಿಸಿದರು. ಅಷ್ಟರಲ್ಲಿ ಅವನು ತನ್ನ ಕತ್ತಿಯನ್ನು ಹೊರಕ್ಕೆಳೆದು, " ತಲೆಗಳು ತುಂಡಾಗಲಿ ! " ಎಂದ ಅರೆಕ್ಷಣದಲ್ಲಿ ಆ ಮೋಸಗಾರರಾದ ರಾಜ ದ್ರೋಹಿಗಳ ತಲೆಗಳೆಲ್ಲಾ ಉರುಳಿ ಬಂದು ಅವನ ಮುಂದೆ ಬಿದ್ದವು. ಅವನು ಮತ್ತೆ ಬಂಗಾರದ ಬೆಟ್ಟದ ರಾಜನಾದ.

# ಮೋಚಿಯವನಿಗೆ ಕಿನ್ನರರ ಸಹಾಯ

ಒಂದು ಊರಿನಲ್ಲಿ ಒಬ್ಬ ಮೋಚಿಯಿದ್ದ. ಅವನು ಪ್ರತಿದಿವಸವೂ ಕಷ್ಟಪಟ್ಟು ಕೆಲಸ ಮಾಡುತ್ತಿದ್ದ. ಇದಲ್ಲದೆ ಬಹಳ ಸತ್ಯವಂತ. ಆದರೆ ಅವನಿಗೆ ಅನ್ನ ಬಟ್ಟೆಗಳಿಗೆ ಸಾಕಾಗುವಷ್ಟು ಸಂಪಾದನೆ ಇರಲಿಲ್ಲ.

ಕಡೆಗೆ ಒಂದುಸಾರಿ ಅವನಲ್ಲಿ ಇದ್ದುದೆಲ್ಲಾ ಖರ್ಚಾಗಿ ಹೋಯಿತು. ಜೇಬು ಬರಿದಾಯಿತು. ಉಳಿದಿದ್ದುದೆಂದರೆ ಒಂದು ಜೊತೆ ಜೋಡುಗಳಿಗೆ ಆಗುವಷ್ಟು ಹದ ಮಾಡಿದ ಚರ್ಮ ಮಾತ್ರ. ಅವನು ಅದನ್ನು ಸರಿಯಾಗಿ ಕತ್ತರಿಸಿಟ್ಟು ಮಾರನೆಯ ದಿನ ಬೆಳಗಾಗುವ ಮುಂಚೆಯೇ ಎದ್ದು ಕೆಲಸಕ್ಕೆ ಆರಂಭಿಸಬೇಕೆಂದು ಯೋಚಿಸಿ, ಮಲಗಿದ. ಎಷ್ಟೇ ಕಷ್ಟವಿದ್ದರೂ ದೇವರ ಮೇಲೆ ಭಾರ ಹಾಕಿ ನಿಶ್ಚಿಂತೆಯಿಂದ ಇರುವ ಸ್ವಭಾವ ಅವನದು. ಆದ್ದರಿಂದಲೇ ಮಲಗಿದೊಡನೆಯೇ ನಿದ್ದೆ ಬಂತು.

ಬೆಳಗ್ಗೆ ಅವನು ಬೇಗ ಎದ್ದು, ಮುಖ ತೊಳೆದು, ದೇವರಿಗೆ ಕೈ ಮುಗಿದು, ಕೆಲಸಕ್ಕೆ ಕುಳಿತುಕೊಂಡ. ಕುಳಿತುಕೊಂಡು ತಾನು ಹಿಂದಿನದಿನ ಕತ್ತರಿಸಿಟ್ಟಿದ್ದ ಚರ್ಮವನ್ನು ಕೈಗೆ ತೆಗೆದುಕೊಳ್ಳಬೇಕೆಂದು ಆ ಕಡೆ ತಿರುಗಿದ ನೋಡುತ್ತಾನೆ—ಚರ್ಮದ ಬದಲು ಒಂದು ಜೊತೆ ಜೋಡುಗಳು ಅಲ್ಲಿ ಕುಳಿತಿದ್ದವು. ಅವನಿಗೆ ಆಶ್ಚರ್ಯವಾಯಿತು. ಏನು ಹೇಳುವುದಕ್ಕೂ ತೋಚಲಿಲ್ಲ. ಕೆಲಸ ಬಹಳ ಸಮರ್ಪಕವಾಗಿತ್ತು. ಒಂದಾದರೂ ತಪ್ಪು ಹೊಲಿಗೆ ಬಿದ್ದಿರಲಿಲ್ಲ. ಎಲ್ಲವೂ ಚೊಕ್ಕಟವಾಗಿ ಮುಗಿದಿತ್ತು.

ಆ ದಿನವೇ ಒಬ್ಬ ಗಿರಾಕಿ ಅವನ ಅಂಗಡಿಗೆ ಬಂದ. ಹೊಸ ಜೋಡುಗಳನ್ನು ನೋಡಿ ಅವನಿಗೆ ಬಹಳ ಮೆಚ್ಚಿಕೆಯಾಯಿತು. ಆದ್ದರಿಂದ ಅವನು ಅವಕ್ಕೆ ಎಂದಿಗಿಂತಲೂ ಹೆಚ್ಚಾಗಿಯೇ ಬೆಲೆ ಕೊಟ್ಟು ತೆಗೆದುಕೊಂಡ.

ಈ ಹಣದಿಂದ ಮೋಚಿ ಮತ್ತೆರಡು ಜೊತೆ ಜೋಡಿಗೆ ಬೇಕಾಗುವಷ್ಟು ಚರ್ಮ ತಂದ. ಅದನ್ನೂ ಕತ್ತರಿಸಿ, ಬೆಳಗ್ಗೆ ಬೇಗ ಎದ್ದು ಹೊಲಿಯಬೇಕೆಂದು ಒಂದು ಕಡೆಗಿಟ್ಟು ಮಲಗಿದ.

ಆದರೆ ಅವನು ಕಷ್ಟಪಡಬೇಕಾದ ಆವಶ್ಯಕತೆಯೇ ಇರಲಿಲ್ಲ. ಬೆಳಗ್ಗೆ ಎದ್ದು ನೋಡುವ ವೇಳೆಗೆ ಕೆಲಸ ಮುಗಿದುಹೋಗಿತ್ತು. ಸ್ವಲ್ಪ ಹೊತ್ತಿನಲ್ಲೇ ಕೊಳ್ಳುವವರು ಬಂದು ಒಳ್ಳೆಯ ಬೆಲೆಯನ್ನು ಕೊಟ್ಟು ಅವನ್ನು ತೆಗೆದುಕೊಂಡು ಹೋದರು.

ಈ ದುಡ್ಡಿನಿಂದ ಅವನು ನಾಲ್ಕು ಜೊತೆ ಜೋಡುಗಳಿಗೆ ಆಗುವಷ್ಟು ಚರ್ಮ ತಂದ. ಇದನ್ನೂ ಕತ್ತರಿಸಿಟ್ಟು ನಿದ್ದೆ ಹೋದ. ಬೆಳಗಾಗುವ ಹೊತ್ತಿಗೆ ಜೋಡುಗಳು ಸಿದ್ಧವಾಗಿದ್ದವು.

ಹೀಗೆಯೇ ಸ್ವಲ್ಪಕಾಲ ನಡೆಯಿತು. ಸಾಯಂಕಾಲ ಕತ್ತರಿಸಿಟ್ಟ ಚರ್ಮ ಮರುದಿನ ಹಗಲು ಹುಟ್ಟುವ ಹೊತ್ತಿಗೆ ಜೋಡುಗಳಾಗಿರುತ್ತಿತ್ತು. ಒಂದೆರಡು ತಿಂಗಳಲ್ಲೇ ಮೋಚಿ ಕೈತುಂಬ ಹಣ ಗಳಿಸಿ ಒಳ್ಳೆಯ ಕಸಬುದಾರನಾದ.

ಆ ವರುಷ ಚಳಿಗಾಲದಲ್ಲಿ ಒಂದು ದಿನ ಸಂಜೆ ಅವನೂ ಅವನ ಹೆಂಡತಿಯೂ ಬೆಂಕಿಯ ಮುಂದೆ ಮೈಕಾಯಿಸಿಕೊಳ್ಳುತ್ತ ಕುಳಿತು ಮಾತಾಡುತ್ತಿದ್ದರು. ಅವನು " ಈ ದಿವಸ ರಾತ್ರಿಯೆಲ್ಲಾ ಎದ್ದು ಕುಳಿತಿದ್ದು ನೋಡಬೇಕೆಂದಿದ್ದೇನೆ. ನನ್ನ ಕೆಲಸವನ್ನೆಲ್ಲಾ ಹೀಗೆ ಪ್ರತಿದಿನವೂ ಯಾರು ಮಾಡುತ್ತಿರುವರೋ ಪತ್ತೆ ಮಾಡಬೇಕು " ಎಂದ.

ಅವಳು " ಹೌದು, ನನಗೂ ಹಾಗೆಯೇ ಅನ್ನಿಸುತ್ತದೆ " ಎಂದಳು.

ರಾತ್ರಿಯೆಲ್ಲಾ ದೀಪ ಉರಿಯುತ್ತಲೇ ಇತ್ತು. ಅವರಿಬ್ಬರೂ ಕೋಣೆಯ ಮೂಲೆಯಲ್ಲಿ ಒಂದು ಕಂಬಳಿಯ ಪರದೆಯನ್ನು ಇಳಿಯಬಿಟ್ಟು, ಅದರ ಹಿಂದೆ ಅವಿತುಕೊಂಡು, ಇಣಿಕಿ ನೋಡುತ್ತ ಕುಳಿತರು.

ರಾತ್ರಿ ಹನ್ನೆರಡು ಗಂಟೆಯಾಯಿತು. ಬೆತ್ತಲೆಯಾಗಿದ್ದ ಕುಳ್ಳರಾದ ಇಬ್ಬರು ಕಿನ್ನರರು — ಎಂದರೆ ಒಂದು ಜಾತಿಯ ದೇವತೆಗಳು — ಅಲ್ಲಿಗೆ ಬಂದರು. ಬಂದವರೇ ದಿನವೂ ಮೋಚಿ ಕುಳಿತುಕೊಳ್ಳುತ್ತಿದ್ದ ಸ್ಥಳದಲ್ಲಿ ಕುಳಿತು, ಅವನು ಕತ್ತರಿಸಿಟ್ಟಿದ್ದ ಚರ್ಮವನ್ನೆಲ್ಲಾ ಕೈಗೆ

ತೆಗೆದುಕೊಂಡು ಹೊಲಿಯಲು ಆರಂಭಿಸಿದರು. ಅವರು ಹೊಲಿಯು ತ್ತಿದ್ದ ವೇಗವನ್ನು ಕಂಡು ಮೋಚಿಗೆ ಮುಖವೆಲ್ಲಾ ಕಣ್ಣಾಯಿತು. ಅವನು ಮಾತು ಕೂಡ ಆಡದೆ ಅವರ ಕೈಗಳನ್ನೇ ದುರದುರನೆ ನೋಡು ತ್ತಿದ್ದ. ಅವರಿಬ್ಬರೂ ತಮ್ಮ ಕೆಲಸವೆಲ್ಲವೂ ಪೂರೈಸುವವರೆಗೂ ನಿಲ್ಲಲೇ ಇಲ್ಲ. ಇನ್ನೂ ಬೆಳಕು ಹರಿಯುವುದಕ್ಕೆ ಎಷ್ಟೋ ಹೊತ್ತಿತ್ತು. ಆಗಲೇ ಜೋಡುಗಳೆಲ್ಲಾ ಸಿದ್ಧವಾಗಿಬಿಟ್ಟವು. ಅವರು ಬೇಗ ಬೇಗನೆ ಮಿಂಚಿನಂತೆ ಹಾರಿ, ಕೋಣೆಯಿಂದ ಹೊರಟು ಹೋದರು.

ಮಾರನೆಯದಿನ ಮೋಚಿಯ ಹೆಂಡತಿ "ಪಾಪ, ಈ ಕುಳ್ಳರು ನಾವು ಐಶ್ವರ್ಯವಂತರಾಗುವ ಹಾಗೆ ಮಾಡಿದ್ದಾರೆ. ನಾವು ಅವರಿಗೆ ಕೃತಜ್ಞರಾಗಿರಬೇಕು. ಅವರು ನಮಗೆ ಮಾಡಿದ ಉಪಕಾರಕ್ಕೆ ಬದ ಲಾಗಿ ಪ್ರತ್ಯುಪಕಾರ ಮಾಡಬೇಕು. ಅವರು ಬರಿಯ ಮೈಯಲ್ಲಿ ಓಡಾ ಡುವುದನ್ನು ನೋಡಿದರೆ ನನಗೆ 'ಅಯ್ಯೋ!' ಎನ್ನಿಸುತ್ತದೆ. ಚಳಿ ಯಾಗದಂತೆ ಹೊದ್ದುಕೊಳ್ಳಲು ಅವರ ಹತ್ತಿರ ಒಂದು ಚೂರು ಬಟ್ಟೆಯೂ ಇಲ್ಲ. ಆದ್ದರಿಂದ ನಾನು ಅವರಿಬ್ಬರಿಗೂ ಒಂದೊಂದು ಅಂಗಿಯನ್ನೂ ಒಂದೊಂದು ಟೋಪಿಯನ್ನೂ ಹೊಲಿದು ಕೊಡು ತ್ತೇನೆ. ಜೊತೆಗೆ ಎರಡು ಪುಟ್ಟ ಪಂಚೆಗಳನ್ನು ತರೋಣ. ನೀನು ಅವರಿಬ್ಬರಿಗೂ ಒಂದೊಂದು ಜೊತೆ ಜೋಡುಗಳನ್ನು ತಯಾರು ಮಾಡು" ಎಂದು ಗಂಡನಿಗೆ ಹೇಳಿದಳು.

ಮೋಚಿಗೆ ಈ ಯೋಚನೆ ಬಹಳ ಒಳ್ಳೆಯದೆಂದು ತೋರಿತು. ಇವೆಲ್ಲಾ ಸಿದ್ಧವಾದ ಮೇಲೆ ಒಂದು ದಿನ ಸಂಜೆ ಅವರು ಅವನ್ನು ತಾವು ದಿನವೂ ಚರ್ಮವನ್ನು ಕತ್ತರಿಸಿಡುತ್ತಿದ್ದ ಸ್ಥಳದಲ್ಲಿ ಚರ್ಮಕ್ಕೆ ಬದ ಲಾಗಿ ಇಟ್ಟರು. ಅನಂತರ ಇಬ್ಬರೂ ಮೂಲೆಯಲ್ಲಿದ್ದ ಪರದೆಯ ಹಿಂದೆ ಹೋಗಿ ಇಣುಕಿ ನೋಡುತ್ತ ಕುಳಿತರು.

ನಡುರಾತ್ರಿಯ ಹೊತ್ತಿಗೆ ಕಿನ್ನರರಿಬ್ಬರೂ ಬಂದರು. ಬಂದ ಕೂಡಲೆ ಇಬ್ಬರೂ ಕೆಲಸಕ್ಕೆ ಮೊದಲಿಡುವುದಕ್ಕೆಂದು ಕುಳಿತು ಕೊಂಡರು. ಆದರೆ ಚರ್ಮದ ಬದಲು ಬಟ್ಟೆಗಳಿದ್ದುದನ್ನು ನೋಡಿ ದಾಗ ಅವರ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ಇಬ್ಬರೂ

ಆನಂದದಿಂದ ಉಬ್ಬಿ ನಕ್ಕು ನಕ್ಕು ಸಾಕಾದರು. ಅನಂತರ ಇಬ್ಬರೂ ಕಣ್ಣು ಮುಚ್ಚಿ ತೆರೆಯುವುದರೊಳಗೆ ಆ ಬಟ್ಟೆಗಳನ್ನೆಲ್ಲಾ ಧರಿಸಿ ಕುಣಿದಾಡಿದರು. ಕುಣಿಯುತ್ತ ಕುಣಿಯುತ್ತ ಹಾಗೆಯೇ ಕೋಣೆಯಿಂದ ಹೊರಕ್ಕೆ ಹಾರಿಹೋದರು. ಆಮೇಲೆ ಮೋಚಿ ಅವರನ್ನು ನೋಡಲಿಲ್ಲ. ಆದರೆ ಅಲ್ಲಿಂದ ಮುಂದಕ್ಕೆ ಅವನ ವ್ಯಾಪಾರ ಚೆನ್ನಾಗಿ ಬೆಳೆಯಿತು. ಅವನ ಸುಖ ದಿನ ದಿನಕ್ಕೂ ಹೆಚ್ಚಿತು.

# ಬಂಗಾರದ ಹಕ್ಕಿ

ಒಂದಾನೊಂದು ಕಾಲದಲ್ಲಿ ಒಬ್ಬ ದೊರೆಯಿದ್ದ. ಅವನಿಗೆ ಒಂದು ಸೊಗಸಾದ ತೋಟವಿತ್ತು. ಆ ತೋಟದಲ್ಲಿ ಒಂದು ಮಾವಿನ ಮರವಿತ್ತು. ಆ ಮರದಲ್ಲಿ ಬಂಗಾರದ ಹಣ್ಣು ಬಿಡುತ್ತಿದ್ದವು. ಈ ಹಣ್ಣುಗಳನ್ನು ಯಾವಾಗಲೂ ಎಣಿಕೆ ಮಾಡಿರುತ್ತಿದ್ದರು. ಆದರೆ ಹೇಗೋ ಏನೋ ಅವು ಹಣ್ಣಾಗುವ ವೇಳೆಗೆ ಸರಿಯಾಗಿ ಪ್ರತಿ ರಾತ್ರಿಯೂ ಒಂದೊಂದು ಹಣ್ಣು ಮಾಯವಾಗಿಬಿಡುತ್ತಿತ್ತು.

ರಾಜ ಇದನ್ನು ಕಂಡು ಬಹಳ ಕೋಪಗೊಂಡ. ತೋಟಗಾರ ರಾತ್ರಿಯೆಲ್ಲಾ ಆ ಮರದ ಕೆಳಗೆ ಕಾವಲಿರಬೇಕೆಂದು ಅಪ್ಪಣೆಮಾಡಿದ.

ತೋಟಗಾರ ತನ್ನ ಹಿರಿಯ ಮಗನನ್ನು ಕಾವಲಿಗೆ ಗೊತ್ತು ಮಾಡಿದ. ಆದರೆ ಈ ಹುಡುಗ ಶುದ್ಧ ಸೋಮಾರಿ. ಹನ್ನೆರಡು ಗಂಟೆ ಹೊಡೆದ ಕೂಡಲೆ ಅವನಿಗೆ ನಿದ್ದೆ ಬಂದು ಬಿಟ್ಟಿತು. ಬೆಳಗಾದಾಗ ನೋಡಲು ಒಂದು ಮಾವಿನಹಣ್ಣು ಕಳೆದುಹೋಗಿತ್ತು.

ಆಗ ಎರಡನೆಯವನು ಕಾವಲಿರಬೇಕೆಂದು ಅಪ್ಪಣೆಯಾಯಿತು. ಮಧ್ಯರಾತ್ರಿಯಲ್ಲಿ ಅವನೂ ನಿದ್ದೆಹೋದ. ಬೆಳಗಾಗುವ ಹೊತ್ತಿಗೆ ಇನ್ನೊಂದು ಮಾವಿನಹಣ್ಣು ಹೋಗಿತ್ತು.

ಮೂರನೆಯದಿನ ಮೂರನೆಯ ಮಗ ತಾನು ಕಾವಲಿರುವುದಾಗಿ ಹೇಳಿದ. ಆದರೆ ತೋಟಗಾರ ಅವನಿಗೆ ಏನಾದರೂ ಅಪಾಯ ಒದಗ ಬಹುದೆಂದು ಹೆದರಿಕೆಯಿಂದ ಅವನನ್ನು ಕಳುಹಿಸಲು ಮೊದಲು ಇಷ್ಟಪಡಲಿಲ್ಲ. ಬಹಳ ಹಿಂದೇಟುಹಾಕಿ ಕಡೆಗೆ ಸಮ್ಮತಿಸಿದ. ಮೂರನೆಮಗ ಮರದ ಕೆಳಗೆ ಹೋಗಿ ಮಲಗಿದ.

ಗಡಿಯಾರ ಹನ್ನೆರಡು ಹೊಡೆಯುವ ಹೊತ್ತಿಗೆ ಅವನಿಗೆ ಗಾಳಿ ಯಲ್ಲಿ ಮರಮರ ಎಂದು ಶಬ್ದ ಕೇಳಿಬಂತು. ಅಪರಂಜಿ ಬಂಗಾರದ ದೇಹವಿದ್ದ ಹಕ್ಕಿಯೊಂದು ಹಾರಿ ಬಂತು. ಅದು ತನ್ನ ಕೊಕ್ಕಿನಿಂದ

ಒಂದು ಮಾವಿನಹಣ್ಣನ್ನು ಕೀಳುತಿರಲು, ತೋಟಗಾರನ ಮಗ ಚಂಗನೆ ಎದ್ದುನಿಂತು ಅದರ ಮೇಲೆ ಒಂದು ಬಾಣ ಬಿಟ್ಟ.

ಆದರೆ ಆ ಬಾಣದಿಂದ ಹಕ್ಕಿಗೆ ಏನೂ ಅಪಾಯವಾಗಲಿಲ್ಲ. ಅದು ತನ್ನ ಬಾಲದಿಂದ ಒಂದು ಚಿನ್ನದ ಗರಿಯನ್ನು ಮಾತ್ರ ಕೆಳಕ್ಕೆ ಕೆಡವಿ ಓಡಿಹೋಯಿತು.

ಮಾರನೆಯ ದಿನ ಮುಂಜಾನೆ ಆ ಚಿನ್ನದ ಗರಿಯನ್ನು ರಾಜನ ಎದುರಿಗೆ ಒಯ್ದು ತೋರಿಸಿದರು. ರಾಜ ತನ್ನ ಆಸ್ಥಾನಿಕರನ್ನು ಕರೆಸಿದ. ಅವರು ಅದು ಅವನ ರಾಜ್ಯದಲ್ಲಿದ್ದ ಮಿಕ್ಕೆಲ್ಲ ಐಶ್ವರ್ಯಕ್ಕಿಂತಲೂ ಹೆಚ್ಚು ಬೆಲೆಯುಳ್ಳದ್ದೆಂದು ಒಮ್ಮತದಿಂದ ಅಭಿಪ್ರಾಯಕೊಟ್ಟರು. ದೊರೆ ಜಿಪುಣರಲ್ಲಿ ಜಿಪುಣ. "ಒಂದು ಗರಿಯಿಂದ ನನಗೆ ಏನೂ ಪ್ರಯೋಜನವಿಲ್ಲ, ಇಡಿ ಹಕ್ಕಿಯೇ ಬೇಕು" ಎಂದ.

ಆಗ ತೋಟಗಾರನ ಹಿರಿಯಮಗನಿಗೆ ದುರಾಸೆ ಏರಿತು. ಆ ಬಂಗಾರದ ಹಕ್ಕಿಯನ್ನು ತಾನು ದೊರೆಗೆ ತಂದುಕೊಟ್ಟರೆ ತನಗೆ ಒಳ್ಳೆಯ ಬಹುಮಾನ ಲಭಿಸುವುದೆಂದು ಅವನು ಯೋಚಿಸಿದ. ಅದು ಸುಲಭವಾಗಿ ಸಿಕ್ಕುವುದೆಂದು ಭಾವಿಸಿ, ಅದನ್ನು ಹುಡುಕಲು ಹೊರಟ.

ಸ್ವಲ್ಪದೂರ ನಡೆಯುತ್ತಲೇ ಅವನು ಒಂದು ಕಾಡಿಗೆ ಬಂದ. ಅಲ್ಲಿ ಒಂದು ನರಿ ಕುಳಿತಿತ್ತು. ಅವನು ಬಿಲ್ಲನ್ನು ಕೈಗೆ ತೆಗೆದುಕೊಂಡು ಆ ನರಿಯ ಮೇಲೆ ಬಾಣ ಬಿಡಲು ಸಿದ್ಧನಾದ.

ನರಿ "ನನ್ನನ್ನು ಹೊಡೆಯಬೇಡ. ನಾನು ನಿನಗೆ ಅವಶ್ಯಕವಾದ ಬುದ್ಧಿವಾದ ಹೇಳುತ್ತೇನೆ. ನೀನು ಬಂದಿರುವ ಕೆಲಸ ಏನೆಂದು ನನಗೆ ಗೊತ್ತು. ನೀನು ಬಂಗಾರದ ಹಕ್ಕಿಗೋಸ್ಕರ ಬಂದಿರುವೆ. ಸಾಯಂಕಾಲದ ಹೊತ್ತಿಗೆ ನೀನೊಂದು ಹಳ್ಳಿಗೆ ಹೋಗುವೆ. ಅಲ್ಲಿ ಎದುರುಬದುರಾಗಿರುವ ಎರಡು ಧರ್ಮಶಾಲೆಗಳಿವೆ. ಅದರಲ್ಲಿ ಒಂದು ನೋಡಲು ಬಹಳ ಸೊಗಸಾಗಿದೆ. ನೀನು ಅಲ್ಲಿಗೆ ಹೋಗಬೇಡ. ಇನ್ನೊಂದು ಬಡವರ ಮನೆಯಂತೆ ಕೀಳಾಗಿದೆ. ಅಲ್ಲಿಗೆ ಹೋಗಿ ರಾತ್ರಿಯನ್ನು ಕಳೆ" ಎಂದಿತು.

ಆದರೆ ಅವನು "ನಾನು ಬಂದಿರುವ ಉದ್ದೇಶ ಈ ಪ್ರಾಣಿಗೇನು ಗೊತ್ತು!" ಎಂದುಕೊಂಡು, ಗರ್ವದಿಂದ ಅದರ ಕಡೆಗೆ ಒಂದು ಬಾಣ ಬಿಟ್ಟ.

ಆ ಬಾಣ ಗುರಿ ತಪ್ಪಿತು. ನರಿ ಬಾಲವನ್ನು ಬೆನ್ನಿನ ಮೇಲಿಟ್ಟುಕೊಂಡು ಕಾಡಿನೊಳಕ್ಕೆ ಓಡಿಹೋಯಿತು.

ಅವನು ಮುಂದೆ ನಡೆದ. ಸಂಜೆ ನರಿ ಹೇಳಿದ್ದ ಎರಡು ಧರ್ಮಶಾಲೆಗಳಿದ್ದ ಹಳ್ಳಿ ಸಿಕ್ಕಿತು. ಒಂದರಲ್ಲಿ ಜನ ತಿಂದು ತೇಗಿ ಹಾಡಿ ಕುಣಿದಾಡುತ್ತಿದ್ದರು. ಇನ್ನೊಂದು ಕೊಳೆ ತುಂಬಿ ಅಸಹ್ಯವಾಗಿತ್ತು.

ಅವನು "ಅಂತಹ ಸೊಗಸಾದ ಸ್ಥಳವನ್ನು ಬಿಟ್ಟು ಈ ದರಿದ್ರ ಕೊಂಪೆಗೆ ಬಂದರೆ ನನ್ನನ್ನು ಹುಚ್ಚನೆನ್ನ ಬೇಕಾಗುತ್ತದೆ" ಎಂದು ಯೋಚಿಸಿ, ಚೆನ್ನಾಗಿ ಕಾಣುತ್ತಿದ್ದ ಮನೆಯನ್ನು ಹೊಕ್ಕು, ಅಲ್ಲಿದ್ದವರೊಡನೆ ಸೇರಿ, ತಾನೂ ಗಂಟಲವರೆಗೂ ಕಟ್ಟಿರೆಯಾಗುವಂತೆ ತಿಂದು, ಕುಡಿದು, ಬಿದ್ದುಕೊಂಡ. ತಾನು ಹುಡುಕಿಕೊಂಡು ಬಂದಿದ್ದ ಹಕ್ಕಿ ಅವನಿಗೆ ಪೂರ್ತಿಯಾಗಿ ಮರತೇ ಹೋಯಿತು.

ಅನೇಕ ದಿನ ಕಳೆದವು. ಹಿರಿಯಮಗ ಹಿಂದಿರುಗಲಿಲ್ಲ. ಅವನ ವಿಚಾರವಾಗಿ ಯಾವ ಸಮಾಚಾರವೂ ಬರಲಿಲ್ಲ. ಆದ್ದರಿಂದ ಎರಡನೆಯವನು ಹೊರಟ.

ಅವನಿಗೂ ಅಣ್ಣನಿಗೆ ಆಗಿದ್ದಂತೆಯೇ ಆಯಿತು. ಅವನೂ ನರಿಯನ್ನು ನೋಡಿದ. ಅದು ಅವನಿಗೂ ಬುದ್ಧಿಯ ಮಾತುಗಳನ್ನು ಹೇಳಿತು. ಆದರೆ ಅವನು ಧರ್ಮಶಾಲೆಗಳಿದ್ದ ಹಳ್ಳಿಗೆಬಂದಾಗ ಅವರಣ್ಣ—ತೋಟಗಾರನ ಹಿರಿಯಮಗ—ಗಲಭೆ ತುಂಬಿದ್ದ ಮನೆಯ ಕಿಟಕಿಯಲ್ಲಿ ನಿಂತಿದ್ದ. ಅವನು ಇವನನ್ನು ಕರೆದ. ಇವನು ಚಪಲತೆಯನ್ನು ತಡೆಯಲಾರದೆ ಅದರ ಒಳಕ್ಕೆ ಹೋಗಿ ಬಂಗಾರದ ಹಕ್ಕಿಯನ್ನೂ ತನ್ನ ದೇಶವನ್ನೂ ಮರೆತುಬಿಟ್ಟ.

ಮತ್ತೆ ಸ್ವಲ್ಪಕಾಲ ಕಳೆಯಿತು. ಕಿರಿಯಮಗನೂ ಬಂಗಾರದ ಹಕ್ಕಿಯನ್ನು ಹುಡುಕಿಕೊಂಡು ಹೋಗಲು ಅಪೇಕ್ಷೆಪಟ್ಟ. ಆದರೆ ತೋಟಗಾರ ಅವನನ್ನು ಕಳುಹಿಸಲು ಬಹಳ ದಿನ ಸಮ್ಮತಿಸಲಿಲ್ಲ. ಈ

ಮಗನನ್ನು ಕಂಡರೆ ಅವನಿಗೆ ಮಿಗಿಲಾದ ಪ್ರೀತಿ. ಯಾವುದಾದರೂ ದುರದೃಷ್ಟ ಒದಗಿ ಇವನೂ ಹಿಂದಿರುಗದೆ ಹೋಗಬಹುದೆಂದು ಅವನು ಹೆದರಿದ. ಆದರೆ ಹುಡುಗ ಒಂದೇಸಮನೆ ಹಟ ಹಿಡಿದ. ಕೊನೆಗೆ ಅವನು ಹೊರಡಬಹುದೆಂದು ಒಪ್ಪಿಗೆ ದೊರೆಯಿತು.

ಮೊದಲನೆಯವರಿಬ್ಬರು ಬಂದಿದ್ದ ಕಾಡಿಗೆ ಇವನೂ ಬಂದ. ಅಲ್ಲಿ ನರಿ ಸಿದ್ಧವಾಗಿ ನಿಂತಿತ್ತು. ಅದು ಅವನಿಗೂ ಬುದ್ಧಿ ಹೇಳಿತು. ಅವನು ತನ್ನ ಅಣ್ಣಂದಿರು ಮಾಡಿದಂತೆ ಅದನ್ನು ಕೊಲ್ಲಲು ಪ್ರಯತ್ನಿಸ ಲಿಲ್ಲ; ಅದಕ್ಕೆ ತನ್ನ ಕೃತಜ್ಞತೆಯನ್ನು ಸೂಚಿಸಿದ. ಆದ್ದರಿಂದ ನರಿ "ನೀನು ನನ್ನ ಬಾಲದ ಮೇಲೆ ಕುಳಿತುಕೊ, ವೇಗವಾಗಿ ಪ್ರಯಾಣ ಮಾಡಬಹುದು" ಎಂದು ಬಾಲ ಚಾಚಿತು.

ಅವನು ನರಿಯ ಬಾಲದ ಮೇಲೆ ಕುಳಿತುಕೊಂಡ. ನರಿ ಓಡ ಲಾರಂಭಿಸಿತು. ಅದು ಕಲ್ಲು, ಮುಳ್ಳು, ಮರ, ಗಿಡ— ಏನನ್ನೂ ಲಕ್ಷಿ ಸದೆ ಆಕಾಶದಲ್ಲೇ ಹೋಗುತ್ತಿರುವುದೋ ಎನ್ನುವಂತೆ ಹಾರಿತು. ಅದು ಓಡುತ್ತಿದ್ದ ರಭಸಕ್ಕೆ ಹುಡುಗನ ಕೂದಲು ಗಾಳಿಯಲ್ಲಿ ಕೊಯ್ಯನೆ ಶಬ್ದ ಮಾಡುತ್ತಿತ್ತು.

ಧರ್ಮಶಾಲೆಯಿದ್ದ ಹಳ್ಳಿಗೆ ಬಂದಾಗ ನರಿ ಅವನನ್ನು ಕೆಳಗಿ ಳಿಸಿ ಕಾಡಿಗೆ ಹಿಂತಿರುಗಿತು. ಅವನು ಅತ್ತಿತ್ತ ತಿರುಗಿ ನೋಡದೆ ಕಶ್ಮಲ ದಿಂದ ಕೂಡಿದ್ದ ಮನೆಗೆ ಹೋಗಿ, ಅಲ್ಲಿ ರಾತ್ರಿಯೆಲ್ಲಾ ವಿಶ್ರಮಿಸಿ ಕೊಂಡು, ಬೆಳಗಾದ ಕೂಡಲೆ ಮುಂದಿನ ಪ್ರಯಾಣಕ್ಕೆ ಅನುವಾದ.

ನರಿ ಮತ್ತೆ ಬಂತು. ಅದು "ಹೀಗೆಯೇ ನೇರವಾಗಿ ಹೋದರೆ ಸಾಯಂಕಾಲದ ಹೊತ್ತಿಗೆ ಒಂದು ಅರಮನೆ ಸಿಕ್ಕುತ್ತದೆ. ಅದರ ಅಂಗಳದಲ್ಲಿ ಸೈನಿಕರು ಗಾಢನಿದ್ರೆಯಲ್ಲಿ ಮಲಗಿ ಗೊರಕೆಹಾಕುತ್ತಿರು ತ್ತಾರೆ. ಅವರ ಕಡೆಗೆ ನೀನು ಎಳ್ಳಷ್ಟೂ ಗಮನ ಕೊಡಬೇಡ. ಅರಮನೆ ಯನ್ನು ಹೊಕ್ಕು ಮುಂದೆ ಮುಂದೆ ಹೋಗು. ಅಲ್ಲೊಂದು ಕೋಣೆ ಯಲ್ಲಿ ಒಂದು ಮರದ ಪಂಜರವಿರುತ್ತದೆ. ಆ ಪಂಜರದಲ್ಲಿ ನಿನಗೆ ಬೇಕಾದ ಬಂಗಾರದ ಹಕ್ಕಿಯಿರುತ್ತದೆ. ನೀನು ಈ ಕೋಣೆಗೆ ಬರುವ ವರೆಗೂ ಎಲ್ಲೂ ನಿಲ್ಲಬೇಡ. ಆ ಮರದ ಪಂಜರದ ಪಕ್ಕದಲ್ಲಿ ಒಂದು

ಹೊಳೆಹೊಳೆಯುವ ಚಿನ್ನದ ಪಂಜರವಿರುತ್ತದೆ. ಆ ಹಕ್ಕಿಯನ್ನು ಮರದ ಪಂಜರದಿಂದ ಎತ್ತಿ ಸುಂದರವಾಗಿ ಕಾಣುವ ಚಿನ್ನದ ಪಂಜರದಲ್ಲಿಡಲು ಮಾತ್ರ ಖಂಡಿತ ಪ್ರಯತ್ನಿಸಬೇಡ. ಹಾಗೇನಾದರೂ ಮಾಡಿದೆಯೋ–ಆಮೇಲೆ ಪಶ್ಚಾತ್ತಾಪ ಪಡುವೆ" ಎಂದು ಹೇಳಿ, ಬಾಲ ಚಾಚಿತು.

ಅವನು ನರಿಯ ಬಾಲದ ಮೇಲೆ ಕುಳಿತುಕೊಂಡ. ನರಿ ಓಡಲಾರಂಭಿಸಿತು. ಅದು ಕಲ್ಲು, ಮುಳ್ಳು, ಮರ, ಗಿಡ, ಏನನ್ನೂ ಲೆಕ್ಕಿಸದೆ ಆಕಾಶದಲ್ಲೇ ಹೋಗುತ್ತಿರುವುದೋ ಎನ್ನುವಂತೆ ಹಾರಿತು. ಅದು ಓಡುತ್ತಿದ್ದ ರಭಸಕ್ಕೆ ಹುಡುಗನ ಕೂದಲು ಗಾಳಿಯಲ್ಲಿ ರೊಯ್ಯನೆ ಶಬ್ದಮಾಡುತ್ತಿತ್ತು.

ಅರಮನೆಯ ಮುಂಭಾಗದಲ್ಲಿ ಹುಡುಗನನ್ನು ಬಿಟ್ಟು ನರಿ ಕಣ್ಮರೆಯಾಯಿತು. ಅಲ್ಲಿ ಎಲ್ಲವೂ ಅದು ಹೇಳಿದ್ದಂತೆಯೇ ಇತ್ತು. ಅವನು ಒಳಕ್ಕೆ ಪ್ರವೇಶಿಸಿ, ಬಂಗಾರದ ಹಕ್ಕಿಯನ್ನು ಮರದಪಂಜರದಲ್ಲಿಟ್ಟು ತೂಗುಹಾಕಿದ್ದ ಕೋಣೆಗೆ ನಡೆದ. ನೆಲದ ಮೇಲೆ ಚಿನ್ನದ ಪಂಜರವಿತ್ತು. ರಾಜನ ತೋಟದಲ್ಲಿ ಕಳೆದುಹೋಗಿದ್ದ ಮೂರು ಚಿನ್ನದ ಮಾವಿನಹಣ್ಣುಗಳೂ ಅಲ್ಲೇ ಇದ್ದವು.

ಆಗ ಅವನು "ಇಂಥ ಸೊಗಸಾದ ಹಕ್ಕಿಯನ್ನು ಈ ದರಿದ್ರ ಪಂಜರದಲ್ಲಿ ಒಯ್ದರೆ ನೋಡಿದವರು ನಗಲಿಕ್ಕಿಲ್ಲವೆ?" ಎಂದು ಯೋಚಿಸಿ, ಹಕ್ಕಿಯನ್ನು ಮರದ ಪಂಜರದಿಂದ ಈಚೆಗೆ ತೆಗೆದು ಬಂಗಾರದ ಪಂಜರದಲ್ಲಿಟ್ಟ.

ಕೂಡಲೆ ಆ ಹಕ್ಕಿ ಚೀರಲು ಪ್ರಾರಂಭಿಸಿತು. ಇದನ್ನು ಕೇಳಿ ಕಾವಲುಗಾರರಿಗೆ ಎಚ್ಚರವಾಯಿತು. ಅವರು ಅವನನ್ನು ಸೆರೆ ಹಿಡಿದು ರಾಜನ ಎದುರಿಗೆ ಕರೆದೊಯ್ದರು.

ಮಾರನೆಯದಿನ ಬೆಳಗ್ಗೆ ಆಸ್ಥಾನಿಕರೆಲ್ಲರೂ ಸಭೆ ಸೇರಿದರು. ಅವರ ಸಲಹೆ ಪಡೆದು ರಾಜ ಅವನಿಗೆ ಮರಣದಂಡನೆ ವಿಧಿಸಿದ. ಆದರೆ "ಎಲ್ಲೋ ಒಂದು ಕಡೆ ಗಾಳಿಯಷ್ಟು ವೇಗವಾಗಿ ಓಡುವ ಬಂಗಾರದ ಕುದುರೆಯಿದೆಯಂತೆ. ನೀನು ಅದನ್ನು ನನಗೆ ತಂದು

ಕೊಟ್ಟರೆ ನಿನ್ನ ತಪ್ಪನ್ನು ಮನ್ನಿಸಿ ಈ ಬಂಗಾರದ ಹಕ್ಕಿಯನ್ನು ನಿನಗೇ ಕೊಟ್ಟುಬಿಡುತ್ತೇನೆ. ಇಲ್ಲದಿದ್ದರೆ ನೀನು ಸಾಯಲೇಬೇಕು!" ಎಂದ.

ತೋಟಗಾರನ ಮಗ ಚಿಂತೆಯಿಂದ ನಿಟ್ಟುಸಿರು ಬಿಡುತ್ತ ಅರಮನೆಯ ಅಂಗಳಕ್ಕೆ ಬಂದ. ಅಲ್ಲಿ ಅನಿರೀಕ್ಷಿತವಾಗಿ ಅವನ ಸ್ನೇಹಿತ, ನರಿ, ಎದುರಿಗೆ ಬಂದು, "ನೋಡು—ನನ್ನ ಮಾತು ಕೇಳದೆ ಹೋದುದರಿಂದ ಎಂಥ ಕೆಲಸವಾಗಿ ಹೋಯಿತು. ಈಗಲಾದರೂ ನೀನು ನನ್ನ ಮಾತಿನಂತೆ ನಡೆಯುವುದಾದರೆ, ನಾನು ನಿನಗೆ ಬಂಗಾರದ ಕುದುರೆಯನ್ನು ಹೇಗೆ ದೊರಕಿಸಿಕೊಳ್ಳಬೇಕೆಂದು ಹೇಳಿಕೊಡುತ್ತೇನೆ. ನೀನು ನೇರವಾಗಿ ಹೋದರೆ ಆ ಕುದುರೆ ಇರುವ ಸ್ಥಳ ಸಿಕ್ಕುತ್ತದೆ. ಕುದುರೆ ಒಂದು ಅರಮನೆಯ ಲಾಯದಲ್ಲಿದೆ. ಅದರ ಮಗ್ಗುಲಲ್ಲಿ ಸೇವಕ ಮಲಗಿ ಗೊರಕೆ ಹೊಡೆಯುತ್ತಿರುತ್ತಾನೆ. ಆದ್ದರಿಂದ ನೀನು ಅಲ್ಲಿ ನಿಂತು ತಡಮಾಡದೆ ಬೇಗ ಕುದುರೆಯನ್ನು ಹೊರಕ್ಕೆ ತಂದುಬಿಡಬೇಕು. ಆದರೆ ಅದರ ಬೆನ್ನಿನ ಮೇಲೆ ಹಳೆಯದಾದ ಚರ್ಮದ ಜೀನು ಹಾಕಬೇಕೆ ಹೊರತು, ಅದೇ ಕೋಣೆಯಲ್ಲೇ ಇರುವ ಬಂಗಾರದ ಜೀನನ್ನು ಖಂಡಿತ ಹಾಕಕೂಡದು. ಎಚ್ಚರಿಕೆ!" ಎಂದು ಬಾಲ ಚಾಚಿತು.

ಅವನು ನರಿಯ ಬಾಲದ ಮೇಲೆ ಕುಳಿತುಕೊಂಡ. ನರಿ ಓಡಲಾರಂಭಿಸಿತು. ಅದು ಕಲ್ಲು, ಮುಳ್ಳು, ಮರ, ಗಿಡ—ಏನನ್ನೂ ಲೆಕ್ಕಿಸದೆ ಆಕಾಶದಲ್ಲೇ ಹೋಗುತ್ತಿರುವುದೋ ಎನ್ನುವಂತೆ ಹಾರಿತು. ಅದು ಓಡುತ್ತಿದ್ದ ರಭಸಕ್ಕೆ ಹುಡುಗನ ಕೂದಲು ಗಾಳಿಯಲ್ಲಿ ರೊಯ್ಯನೆ ಶಬ್ದ ಮಾಡುತ್ತಿತ್ತು.

ಎಲ್ಲವೂ ನರಿ ಹೇಳಿದ್ದಂತೆಯೇ ನಡೆಯಿತು. ಕುದುರೆಯ ಚಾಕರ ತನ್ನ ಕೈಗಳನ್ನು ಚಿನ್ನದ ಜೀನಿನ ಮೇಲೆಯೇ ಇಟ್ಟುಕೊಂಡು ಗೊರಕೆ ಹೊಡೆಯುತ್ತಿದ್ದ. ತೋಟಗಾರನ ಮಗ ಕುದುರೆಯನ್ನು ನೋಡಿದಾಗ ಅವನ ಕಣ್ಣಿಗೆ ಆನಂದವಾಯಿತು. "ದೇವಲೋಕದ ಕುದುರೆಯ ಹಾಗಿದೆ! ಇಂಥ ಕುದುರೆಗೆ ಚರ್ಮದ ಜೀನು ಹಾಕುವುದುಂಟೆ? ಥೂ! ಅಸಹ್ಯ!" ಎಂದು ತೀರ್ಮಾನಿಸಿದ. ಚಿನ್ನದ

ಜೇನನ್ನೆ, ಹಾಕಬೇಕೆಂದು ಮೆತ್ತಗೆ ಅದನ್ನು ಎಳೆದ. ಅದರ ಮೇಲೆಯೇ ಕೈಯಿಟ್ಟುಕೊಂಡು ಮಲಗಿದ್ದ ಸೇವಕನಿಗೆ ತಕ್ಷಣ ಎಚ್ಚರ ವಾಯಿತು. ಅವನು ಥಿಗ್ಗನೆ ಎದ್ದು ಕೂಗಿಕೊಂಡ. ಕಾವಲುಗಾರರು ಓಡಿಬಂದು ತೋಟಗಾರನ ಮಗನನ್ನು ಸೆರೆ ಹಿಡಿದರು.

ಮೂರನೆಯ ದಿನ ಬೆಳಗ್ಗೆ ಆಸ್ಥಾನಿಕರೆಲ್ಲರೂ ಸಭೆ ಸೇರಿದರು. ಅವರ ಸಲಹೆ ಪಡೆದು ರಾಜ ಅವನಿಗೆ ಮರಣದಂಡನೆ ವಿಧಿಸಿದ. ಆದರೆ "ಎಲ್ಲೋ ಒಂದು ಕಡೆ ಜಗತ್ತಿನಲ್ಲೇ ಅತ್ಯಂತ ಸುಂದರಿಯಾದ ರಾಜಕುಮಾರಿ ಇದ್ದಾಳಂತೆ. ಅವಳನ್ನು ನೀನು ಇಲ್ಲಿಗೆ ಕರೆತರುವುದಾ ದರೆ ನಿನ್ನ ಪ್ರಾಣವೂ ಉಳಿಯುತ್ತದೆ, ಈ ಬಂಗಾರದ ಕುದುರೆ ಯನ್ನೂ ನಿನಗೇ ಕೊಟ್ಟುಬಿಡುತ್ತೇನೆ. ಇಲ್ಲದಿದ್ದರೆ ನೀನು ಸಾಯಲೇ ಬೇಕು!" ಎಂದ.

ತೋಟಗಾರನಮಗ ವ್ಯಸನದಿಂದ ತಲೆತಗ್ಗಿಸಿಕೊಂಡು ಹೊರಕ್ಕೆ ಬಂದ. ನರಿ ಮತ್ತೆ ಕಾಣಿಸಿಕೊಂಡಿತು. "ನೀನು ನನ್ನ ಮಾತನ್ನು ಏಕೆ ಕೇಳಲಿಲ್ಲ? ಕೇಳಿದ್ದರೆ ಕುದುರೆಯನ್ನೂ ಹಕ್ಕಿಯನ್ನೂ ಇಷ್ಟು ಹೊತ್ತಿಗೆ ಒಯ್ದು ಬಿಡಬಹುದಾಗಿತ್ತು. ಆದರೂ ನಾನು ನಿನಗೆ ಮತ್ತೊಂದು ಸಾರಿ ಬುದ್ಧಿ ಹೇಳುತ್ತೇನೆ ಹೀಗೆಯೇ ನೇರವಾಗಿ ಹೋಗು ಸಂಜೆಯ ಹೊತ್ತಿಗೆ ನೀನೊಂದು ಅರಮನೆಯನ್ನು ಸೇರುವೆ. ಕತ್ತಲಲ್ಲಿ ಎಲ್ಲಾದರೂ ಹುದುಗಿಕೊಂಡು ಹೊಂಚುಕಾಯುತ್ತಿರು. ಬೆಳಗಿನ ಜಾವ ನಾಲ್ಕು ಗಂಟೆಗೆ ಸರಿಯಾಗಿ ರಾಜಕುಮಾರಿ ಸ್ನಾನದ ಮನೆಗೆ ಹೋಗುತ್ತಾಳೆ. ನೀನು ಅವಳ ಹತ್ತಿರಕ್ಕೆ ಹೋಗಿ ಅವಳ ಕೈಹಿಡಿ ದುಕೊ. ಅವಳು ನಿನ್ನ ಹಿಂದೆ ಬಂದುಬಿಡಲು ಸಮ್ಮತಿಸುವಳು. ಆದರೆ ಅವಳು ತನ್ನ ತಂದೆತಾಯಿಗಳಿಗೆ ಹೋಗುತ್ತೇನೆ ಎಂದು ಹೇಳಿ ಬರಲುಮಾತ್ರ ಅವಕಾಶ ಕೊಡಬೇಡ" ಎಂದು ಹೇಳಿ ಬಾಲ ಚಾಚಿತು.

ಅವನು ನರಿಯ ಬಾಲದ ಮೇಲೆ ಕುಳಿತುಕೊಂಡ. ನರಿ ಓಡ ಲಾರಂಭಿಸಿತು. ಅದು ಕಲ್ಲು, ಮುಳ್ಳು, ಮರ ಗಿಡ, ಏನನ್ನೂ ಲೆಕ್ಕಿ ಸದೆ, ಆಕಾಶದಲ್ಲೇ ಹೋಗುತ್ತಿರುವುದೋ ಎನ್ನುವಂತೆ ಹಾರಿತು. ಅದು

ಓಡುತ್ತಿರುವ ರಭಸಕ್ಕೆ ಹುಡುಗನ ಕೂದಲು ಗಾಳಿಯಲ್ಲಿ ರೊಯ್ಯನೆ ಶಬ್ದ ಮಾಡುತ್ತಿತ್ತು.

ಅವನು ಆ ರಾಜಕುಮಾರಿಯಿದ್ದ ಅರಮನೆಗೆ ಬಂದಾಗ ಎಲ್ಲವೂ ನರಿ ಹೇಳಿದ್ದಂತೆಯೇ ಇತ್ತು. ಬೆಳಗಿನಜಾವ ನಾಲ್ಕುಗಂಟೆಗೆ ಸರಿಯಾಗಿ ರಾಜಕುಮಾರಿ ಸ್ನಾನದ ಮನೆಗೆ ಹೋಗುತ್ತಿದ್ದಳು. ಅವನು ಸದ್ದಿಲ್ಲದೆ ನಡೆದು ಅವಳ ಕೈಹಿಡಿದುಕೊಂಡ. ಅವಳಿಗೆ ಅವನ ಅಭಿಲಾಷೆ ಅರ್ಥವಾಯಿತು; ಅವನೊಡನೆ ಓಡಿಹೋಗಲು ಒಪ್ಪಿಕೊಂಡಳು. ಆದರೆ ತನ್ನ ತಂದೆತಾಯಿಯರಿಗೆ ಹೇಳಿಬರಲು ಅನುಮತಿ ಕೊಡಬೇಕೆಂದು ಕಣ್ಣೀರಿಟ್ಟು ಬೇಡಿಕೊಂಡಳು. ಅವನು ಮೊದಲು ಆಗುವುದಿಲ್ಲವೆಂದ. ಅವಳು ಮತ್ತಷ್ಟು ಅತ್ತು ಗೋಳಾಡಿ ಅವನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಅವನು ಒಪ್ಪಿಗೆ ಕೊಡುವವರೆಗೂ ಅವಳು ಮೇಲಕ್ಕೆ ಏಳಲೇ ಇಲ್ಲ.

ಪಾಪ! ಅವನ ದುರದೃಷ್ಟ! ರಾಜಕುಮಾರಿ ತನ್ನ ತಂದೆಗೆ ಈ ವಿಷಯ ತಿಳಿಸುತ್ತಿದ್ದ ಹಾಗೆಯೇ ಅರಮನೆಯಲ್ಲೆಲ್ಲಾ ಗೊಂದಲವೆದ್ದಿತು. ಕಾವಲುಗಾರರು ರಾಜಕುಮಾರಿಯನ್ನು ಅಪಹರಿಸಿಕೊಂಡು ಹೋಗಲು ಬಂದಿದ್ದ ಕಳ್ಳನೆಂದು ಅವನನ್ನು ಸೆರೆ ಹಿಡಿದರು.

ರಾಜ “ನೀನು ನನ್ನ ಕೋಣೆಯ ಕಿಟಕಿಯ ಆಚೆ ಅಡ್ಡವಾಗಿ ನಿಂತಿರುವ ಆ ಗುಡ್ಡವನ್ನು ಎಂಟು ದಿನಗಳೊಳಗೆ ಅಗೆದುಹಾಕಿದ ಹೊರತು ನನ್ನ ಮಗಳು ನಿನಗೆ ಲಭಿಸಲಾರಳು” ಎಂದ.

ಆ ಗುಡ್ಡ ಬಹು ದೊಡ್ಡದು. ಸಾವಿರಾರು ಜನ ಬಂದರೂ ಅದನ್ನು ಕಡಿದುಹಾಕಲು ಆಗುತ್ತಿರಲಿಲ್ಲ. ಅಂತಹುದು ಈ ತೋಟಗಾರನ ಮಗ ಒಬ್ಬನಿಂದ ಏನಾದೀತು? ಅವನು ಏಳು ದಿನ ಗುದ್ದಲಿ ಹಿಡಿದು ಅಗೆದು ಅಗೆದು ಒಂದೇ ಸಮನೆ ಕಷ್ಟಪಟ್ಟರೂ ಗುಡ್ಡ ಸ್ವಲ್ಪವಾದರೂ ಕಡಿಮೆಯಾದಂತೆ ತೋರಲಿಲ್ಲ.

ಆಗ ನರಿ ಬಂದು “ನೀನು ಮಲಗಿ ಹಾಯಾಗಿ ನಿದ್ದೆಹೋಗು. ನಾನು ಕೆಲಸ ಮಾಡುತ್ತೇನೆ” ಎಂದಿತು.

ಬೆಳಗಾದಾಗ ಅವನು ಎದ್ದು ನೋಡಲು ಗುಡ್ಡ ಮಾಯ ವಾಗಿತ್ತು. ಅವನು ಸಂತೋಷದಿಂದ ಉಬ್ಬಿ ದೊರೆಯ ಬಳಿಗೆ ಹೋಗಿ ತಾನು ಗುಡ್ಡವನ್ನು ತೆಗೆದುಹಾಕಿದ್ದುದರಿಂದ ಒಪ್ಪಂದದ ಪ್ರಕಾರ ರಾಜಕುಮಾರಿಯನ್ನು ತನ್ನ ಸಂಗಡ ಕಳುಹಿಸಿಕೊಡಬೇ ಕೆಂದು ಕೇಳಿದ.

ರಾಜ ಕೊಟ್ಟ ಭಾಷೆಗೆ ತಪ್ಪಿ ನಡೆಯುವಂತಿರಲಿಲ್ಲ. ತೋಟ ಗಾರನ ಮಗನೂ ರಾಜಕುಮಾರಿಯೂ ಜೊತೆಯಾಗಿ ಹೊರಟೇ ಬಿಟ್ಟರು.

ನರಿ ಎಲ್ಲಿಂದಲೋ ಅವನ ಬಳಿಗೆ ಬಂದು "ನಮಗೆ ರಾಜ ಕುಮಾರಿ, ಕುದುರೆ, ಹಕ್ಕಿ, ಎಲ್ಲವೂ ದಕ್ಕುವ ಹಾಗೆ ಮಾಡಲು ಉಪಾಯವಿದೆ" ಎಂದಿತು.

ಅವನು "ಹಾ! ಹಾಗಾದರೆ ಬಹಳ ಚೆನ್ನಾಗಿರುತ್ತದೆ! ಆದರೆ ಅವೆಲ್ಲಾ ಒಟ್ಟಿಗೆ ನಮಗೆ ದೊರೆಯುವ ಬಗೆ ಹೇಗೆ? ಎಂದ.

ನರಿ "ನೀನು ನನ್ನ ಮಾತನ್ನು ಕೇಳಿ ನಡೆದರೆ ಬಹಳ ಬೇಗ ಎಲ್ಲವೂ ಆಗುತ್ತದೆ. ನೀನು ಕುದುರೆಯ ಒಡೆಯನಾದ ರಾಜನ ಹತ್ತಿರ ಹೋದರೆ ಅವನು 'ರಾಜಕುಮಾರಿ ಎಲ್ಲಿ?' ಎನ್ನುವನು. 'ಇಗೋ–ಇಲ್ಲಿದ್ದಾಳೆ' ಎನ್ನು. ಆಗ ಅವನಿಗೆ ಸಂತೋಷವಾಗುತ್ತದೆ. ಅವನು ನಿನಗೆ ಬಂಗಾರದ ಕುದುರೆಯನ್ನು ಕೊಟ್ಟುಬಿಡುತ್ತಾನೆ. ನೀನು ಅದರ ಮೇಲೆ ಹತ್ತಿ ಕುಳಿತುಕೊಂಡು ಎಲ್ಲರೊಡನೆಯೂ ಹೋಗಿಬರುತ್ತೇನೆಂದು ಹೇಳು. ರಾಜಕುಮಾರಿಗೆ ಕೊನೆಯಲ್ಲಿ ಹೇಳು. ಆ ನೆಪದಲ್ಲಿ ಅವಳನ್ನು ಎತ್ತಿ ಕುದುರೆಯ ಮೇಲೆ ಕೂಡಿಸಿ ಕೊಂಡು ಅದರ ಪಕ್ಕೆಗಳನ್ನು ನಿನ್ನ ಕಾಲಿನ ಹಿಮ್ಮಡಿಗಳಿಂದ ಬಲ ವಾಗಿ ಚುಚ್ಚು ಅದು ಓಡುತ್ತದೆ. ಸಾಧ್ಯವಾದಷ್ಟು ವೇಗವಾಗಿ ಓಡಿಸು" ಎಂದು ಹೇಳಿತು.

ಎಲ್ಲವೂ ನರಿ ಹೇಳಿದಂತೆಯೇ ನಡೆಯಿತು. ಆಗ ಅದು ಮತ್ತೆ ಬಂದು "ನೀನು ಹಕ್ಕಿ ಇರುವ ಅರಮನೆಗೆ ಬಂದಾಗ ನಾನು ರಾಜ ಕುಮಾರಿಯೊಡನೆ ಹೊರಗಡೆ ನಿಂತಿರುತ್ತೇನೆ. ನೀನು ಕುದುರೆಯ

ಮೇಲೆ ಕುಳಿತೇ ಒಳಗೆ ಹೋಗಿ ರಾಜನೊಡನೆ ಮಾತಾಡು. ಅವನು ಕುದುರೆಯನ್ನು ನೋಡಿದಾಗ ಹಕ್ಕಿಯನ್ನು ಹೊರಕ್ಕೆ ತರುವನು. ನೀನು ಸುಮ್ಮನೆ ಕುಳಿತಿದ್ದು 'ಅದು ನಿಜವಾದ ಬಂಗಾರದ ಹಕ್ಕಿಯೋ ಅಲ್ಲವೋ ನೋಡಲು ಅಪೇಕ್ಷಿಸುತ್ತೇನೆ' ಎನ್ನಬೇಕು. ಅದು ನಿನ್ನ ಕೈಗೆ ಬಂದಕೂಡಲೆ ಓಡಿ ಬರಬೇಕು" ಎಂದು ಹೇಳಿತು.

ಇಲ್ಲಿಯೂ ಕೂಡ ನರಿ ಹೇಳಿದ್ದಂತೆಯೇ ನಡೆಯಿತು. ಅವನಿಗೆ ಹಕ್ಕಿ, ಕುದುರೆ, ಎರಡೂ ಸಿಕ್ಕವು. ರಾಜಕುಮಾರಿ ಅವನ ಜೊತೆಯಲ್ಲಿ ಕುದುರೆಯೇರಿದಳು. ಅವರು ಒಂದು ದೊಡ್ಡ ಕಾಡಿಗೆ ಬಂದರು.

ಆಗ ನರಿ ಅಲ್ಲಿಗೆ ಬಂದು "ನನ್ನನ್ನು ಕೊಂದುಬಿಡು. ನನ್ನ ತಲೆಯನ್ನೂ ಕಾಲುಗಳನ್ನೂ ಕತ್ತರಿಸಿ ಹಾಕು" ಎಂದು ಬೇಡಿಕೊಂಡಿತು.

ತೋಟಗಾರನ ಮಗ ಇದಕ್ಕೆ ಸಮ್ಮತಿಸಲಿಲ್ಲ. "ಇಂಥ ಕೆಲಸವನ್ನು ನೀನು ನನಗೆ ಹೇಳಬಹುದೆ? ನಾನು ಅಷ್ಟು ಕ್ರೂರಿಯೆ?" ಎಂದ.

ನರಿ "ಹೋಗಲಿ; ನಾನು ನಿನಗೆ ಇನ್ನೆರಡು ಮಾತು ತಿಳಿಸುತ್ತೇನೆ. ಎರಡು ವಿಷಯಗಳಲ್ಲಿ ಬಹಳ ಎಚ್ಚರಿಕೆಯಿಂದಿರು. ಮೊದಲನೆಯದಾಗಿ, ಮರಣದಂಡನೆಗೆ ಗುರಿಯಾಗಿ ನೇಣಾಗಿ ಸಾಯಬೇಕಾದವರನ್ನು ಎಂದಿಗೂ ಬಿಡಿಸಿಕೊಳ್ಳಬೇಡ. ಅಂಥವರನ್ನು ಸಾವು ತಪ್ಪಿಸಿ ಕಾಪಾಡುವುದು ಶುದ್ಧ ತಿಳಿಗೇಡಿತನ. ಎರಡನೆಯದಾಗಿ ಯಾವ ನದಿಯ ದಡದಲ್ಲೂ ಕುಳಿತುಕೊಳ್ಳಬೇಡ" ಎಂದಿತು.

ಅವನು "ಆಗಬಹುದು, ಇವೇನೂ ಕಷ್ಟದ ಕೆಲಸಗಳಲ್ಲ" ಎಂದುಕೊಂಡ.

ಅಲ್ಲಿಂದ ಮುಂದಕ್ಕೆ ಅವನು ತನ್ನ ಅಣ್ಣಂದಿರಿಬ್ಬರೂ ಇದ್ದ ಧರ್ಮಶಾಲೆಗಳ ಹಳ್ಳಿಗೆ ಬಂದ. ಅಲ್ಲಿ ಅವನಿಗೆ ದೊಡ್ಡ ಗಲಭೆ ಕೇಳಿ ಬಂತು. ಏನು ಕಾರಣವೆಂದು ವಿಚಾರಿಸಲು, ಜನ "ಈದಿನ ಇಬ್ಬರಿಗೆ ನೇಣು ಹಾಕುತ್ತಾರೆ" ಎಂದರು. ಅವನು ಹತ್ತಿರ ಹೋಗಿ

ನೋಡುತ್ತಾನೆ-ಅಪರಾಧಿಗಳಿಬ್ಬರೂ ಅವನ ಅಣ್ಣಂದಿರೆ! ಅವರಿಬ್ಬರೂ ಈಗ ಇಷ್ಟು ದುಷ್ಟರಾಗಿದ್ದರು.

ಅವನು "ಅವರನ್ನು ಬದುಕಿಸಲು ಸಾಧ್ಯವಿಲ್ಲವೆ? ಪಾಪ, ಅವರು ಎಂಥವರೇ ಆಗಲಿ, ಪ್ರಾಣ ಏಕೆ ಕಳೆದುಕೊಳ್ಳಬೇಕು?" ಎಂದು ಕೇಳಿದ.

ಜನ "ಪಂಚಾಯಿತಿದಾರರಿಗೆ ಕೈ ತುಂಬಾ ಲಂಚಕೊಟ್ಟರೆ ಸಾಧ್ಯವಾಗಬಹುದು" ಎಂದರು.

ಆಗ ಅವನು ಹಿಂದು ಮುಂದು ನೋಡದೆ, ಸ್ವಲ್ಪವೂ ಆಲೋಚನೆ ಮಾಡದೆ, ಅವರು ಕೇಳಿದಷ್ಟು ಹಣ ಕೊಟ್ಟು ಅಣ್ಣಂದಿರಿಬ್ಬರನ್ನೂ ಬಿಡಿಸಿಕೊಂಡ. ಅವರೂ ಅವನೊಡನೆ ಊರಕಡೆಗೆ ಹೊರಟರು.

ಅವರು ನರಿ ಮೊಟ್ಟ ಮೊದಲು ತಮ್ಮನ್ನು ಕಂಡಿದ್ದ ಕಾಡಿಗೆ ಬಂದಾಗ ಗಾಳಿ ತಂಪಾಗಿ ಬೀಸುತ್ತಿತ್ತು. ಕಾಡು ನೋಡುವುದಕ್ಕೆ ಮನೋಹರವಾಗಿತ್ತು. ಅಣ್ಣಂದಿರಿಬ್ಬರೂ "ಈ ನದಿಯ ದಡದಲ್ಲಿ ಕುಳಿತು ಕೊಂಚ ತಿಂಡಿ ತಿಂದು ನೀರು ಕುಡಿದು ವಿಶ್ರಮಿಸಿಕೊಳ್ಳೋಣ" ಎಂದರು.

ಕಿರಿಯವನು ನರಿ ತನಗೆ ಹೇಳಿದ್ದ ಹಿತದ ಮಾತನ್ನು ಮರೆತು. ಬಿಟ್ಟು, "ಹಾಗೆಯೇ ಆಗಲಿ" ಎಂದು, ಅವರ ಪಕ್ಕದಲ್ಲಿ ಕುಳಿತು. ಕೊಂಡ. ಅವನ ಮನಸ್ಸಿನಲ್ಲಿ ಯಾವ ಅನುಮಾನವೂ ಇರಲಿಲ್ಲ."

ಆಗ ಅಣ್ಣಂದಿರಿಬ್ಬರೂ ಮೆಲ್ಲನೆ ಬೆನ್ನು ಹಿಂದೆ ಕೈ ಹಾಕಿ ಅವನನ್ನು ನದಿಯೊಳಕ್ಕೆ ನೂಕಿಬಿಟ್ಟರು.

ಅನಂತರ ಅವರು ರಾಜಕುಮಾರಿಯನ್ನೂ ಕುದುರೆಯನ್ನೂ ಹಕ್ಕಿಯನ್ನೂ ತೆಗೆದುಕೊಂಡು ತಮ್ಮ ಊರಿನ ದೊರೆಯ ಬಳಿಗೆ ಹೋಗಿ "ಇವೆಲ್ಲವನ್ನೂ ನಾವೇ ಕಷ್ಟಪಟ್ಟು ಸಂಪಾದಿಸಿದ್ದೇವೆ" ಎಂದು ಹೇಳಿಕೊಂಡರು. ಅರಮನೆಯಲ್ಲೆಲ್ಲಾ ಬಹಳ ಸಂಭ್ರಮವಾಯಿತು. ಎಲ್ಲರೂ ಸಂತೋಷಗೊಂಡರು. ಆದರೆ ಆ ಕುದುರೆ

ಮಾತ್ರ ಆಹಾರ ತಿನ್ನಲಿಲ್ಲ, ಆ ಹಕ್ಕಿ ಹಾಡಲಿಲ್ಲ, ರಾಜಕುಮಾರಿ ಅಳುವುದನ್ನು ನಿಲ್ಲಿಸಲೇ ಇಲ್ಲ.

ಅತ್ತ ತೋಟಗಾರನ ಕಿರಿಯ ಮಗ ನದಿಯ ತಳಕ್ಕೆ ಹೋಗಿ ಬಿದ್ದುಬಿಟ್ಟಿದ್ದ. ದೇವರ ದಯದಿಂದ ನದಿಯಲ್ಲಿ ಹೆಚ್ಚು ನೀರಿರಲಿಲ್ಲ. ಆದರೂ ಕಡಿದಾಗಿದ್ದ ದಡದ ತುದಿಯಿಂದ ಬಿದ್ದ ಏಟಿಗೆ ಅವನ ಎಲಬುಗಳೆಲ್ಲಾ ಅಲ್ಲಾಡಿ ಹೋಗಿದ್ದುವು. ಎದ್ದು ಕುಳಿತುಕೊಂಡು ದಡವನ್ನು ಹತ್ತಿ ಮೇಲಕ್ಕೆ ಬರಲು ಕೂಡ ಅವನಿಗೆ ಅಗ ತ್ರಾಣವಿಲ್ಲ ದಂತಾಗಿತ್ತು.

ಆಗ ನರಿ ಮತ್ತೊಮ್ಮೆ ಬಂದು ಅವನು ತನ್ನ ಬುದ್ಧಿವಾದವನ್ನು ಕೇಳದೆ ಇದ್ದುದಕ್ಕೆ ಅವನನ್ನು ಚೆನ್ನಾಗಿ ಬೈದು ಹಾಸ್ಯಮಾಡಿತು. ಅದರ ಮಾತನ್ನು ಕೇಳಿದ್ದರೆ ಅವನಿಗೆ ಯಾವ ಅಪಾಯವೂ ಆಗು ತ್ತಿರಲಿಲ್ಲ. ನರಿ "ಆದರೂ ಚಿಂತೆಯಿಲ್ಲ ನಾನು ನಿನ್ನನ್ನು ಇಲ್ಲಿ ಬಿಟ್ಟು ಹೋಗಲಾರೆ, ನನ್ನ ಬಾಲವನ್ನು ಭದ್ರವಾಗಿ ಹಿಡಿದುಕೊ" ಎಂದಿತು.

ಅವನು ನರಿಯ ಬಾಲವನ್ನು ಗಟ್ಟಿಯಾಗಿ ಎರಡು ಕೈಗಳಿಂ ದಲೂ ಹಿಡಿದುಕೊಂಡ. ಅದು ಮೇಲಕ್ಕೆ ಹಾರಿ ದಡ ಸೇರಿತು.

ದಡದ ಮೇಲೆ ಬಂದಾಗ ಅದು "ನಿನ್ನ ಅಣ್ಣಂದಿರು ನಿನ್ನನ್ನು ಕೊಲ್ಲಬೇಕೆಂದು ಒಳಸಂಚು ಮಾಡುತ್ತಿದ್ದಾರೆ. ನೀನು ನಿಮ್ಮ ಊರಿಗೆ ಹೋದರೆ ಅವರ ಕಡೆಯ ಗೂಢಚಾರರ ಕೈಗೆ ಸಿಕ್ಕಿಬೀಳುವೆ ಜೋಪಾನ!" ಎಂದಿತು.

ಆದಕಾರಣ ಅವನು ವೇಷ ಬದಲಾಯಿಸಿಕೊಂಡು ಬಡವನಂತೆ ಬಟ್ಟೆ ಧರಿಸಿ ಗುಟ್ಟಾಗಿ ರಾಜನ ಆಸ್ಥಾನಕ್ಕೆ ಬಂದ.

ಅವನು ಅರಮನೆಗೆ ಕಾಲಿಟ್ಟುದೇ ತಡ ಕುದುರೆ ಆಹಾರ ತಿನ್ನಲು ಮೊದಲು ಮಾಡಿತು, ಹಕ್ಕಿ ಹಾಡಿತು, ರಾಜಕುಮಾರಿ ಅಳುವು ದನ್ನು ನಿಲ್ಲಿಸಿದಳು.

ಅವನು ನೇರವಾಗಿ ರಾಜನ ಬಳಿಗೆ ಹೋಗಿ ತನ್ನ ಅಣ್ಣಂದಿರು ಮಾಡಿದ್ದ ಮೋಸವನ್ನೂ ಅನ್ಯಾಯವನ್ನೂ ವಿವರಿಸಿದ. ರಾಜನ

ಅಪ್ಪಣೆಯ ಪ್ರಕಾರ ಅವರಿಬ್ಬರಿಗೂ ಸೆರೆಯಾಯಿತು. ರಾಜಕುಮಾರಿ ಕಿರಿಯವನಿಗೇ ದೊರೆತಳು. ರಾಜ ಸತ್ತಮೇಲೆ ಅವನೇ ಪಟ್ಟಕ್ಕೇರಿದ.

ಬಹಳ ಕಾಲ ಕಳೆದ ಮೇಲೆ ಅವನು ಒಂದು ಸಾರಿ ತಾನು ಹಿಂದೆ ನರಿಯನ್ನು ಕಂಡಿದ್ದ ಕಾಡಿನೊಳಕ್ಕೆ ಕುದುರೆಯೇರಿ ಹೋದ. ನರಿ ಅಷ್ಟು ದಿವಸವೂ ಅವನಿಗಾಗಿಯೇ ಕಾದಿದ್ದಿತೋ ಎನ್ನುವಂತೆ ಅವನ ಎದುರಿಗೆ ಎಲ್ಲಿಂದಲೋ ಬಂತು. ಅದು ತನ್ನನ್ನು ಕೊಲ್ಲಲೇ ಬೇಕೆಂದೂ ತನ್ನ ತಲೆಯನ್ನೂ ಕಾಲುಗಳನ್ನೂ ಕತ್ತರಿಸಿಹಾಕಬೇಕೆಂದೂ ಮತ್ತೆ ಕಣ್ಣೀರಿಟ್ಟು ಬೇಡಿಕೊಂಡಿತು. ಕಟ್ಟಕಡೆಗೆ ಅವನು ಅದರ ಮಾತಿಗೆ ಒಪ್ಪಿ, ಅದು ಹೇಳಿದಂತೆ ಮಾಡಿದ. ಕ್ಷಣಮಾತ್ರದಲ್ಲಿ ಆ ನರಿ ಒಬ್ಬ ಮನುಷ್ಯನಾಯಿತು. ಆ ಮನುಷ್ಯ ನಮ್ಮ ತೋಟಗಾರನ ಮಗ ಕರೆದುತಂದಿದ್ದ ರಾಜಕುಮಾರಿಯ ತಮ್ಮ. ಅನೇಕ ವರ್ಷಗಳ ಹಿಂದೆ ಕಳೆದು ಹೋಗಿದ್ದವನು ಈಗ ಸಿಕ್ಕಿದ.

# ಜೇನಿನ ರಾಣಿ

ಒಂದಾನೊಂದು ಕಾಲದಲ್ಲಿ ಒಬ್ಬ ರಾಜನಿದ್ದ. ಅವನಿಗೆ ಮೂವರು ಮಕ್ಕಳಿದ್ದರು. ಅವರಲ್ಲಿ ಹಿರಿಯನರಿಬ್ಬರೂ ದೊಡ್ಡವರಾದ ಕೂಡಲೆ ತಮಗೆ ತಕ್ಕ ಕೆಲಸವನ್ನು ಹುಡುಕಿ ಹಣ ಸಂಪಾದಿಸಿ ಕೊಂಡು ಬರಲು ಸಂಚಾರ ಹೊರಟರು.

ಆದರೆ ಬಹಳ ಬೇಗ ಅವರಿಬ್ಬರೂ ಕೆಟ್ಟ ನಡತೆಗೆ ಬಿದ್ದು ತಮ್ಮ ಲ್ಲಿದ್ದ ಹಣವನ್ನೆಲ್ಲಾ ಹಿಡಿತವಿಲ್ಲದೆ ವೆಚ್ಚಮಾಡಿ ಬಿಟ್ಟರು. ಮನೆಗೆ ಹಿಂತಿ ರುಗಲು ಕೂಡ ಅವರ ಕೈಯಲ್ಲಿ ಕಾಸು ಉಳಿಯಲಿಲ್ಲ.

ಆಗ ತೆಳ್ಳಗೆ ಕುಳ್ಳಗಿದ್ದ ಅವರ ತಮ್ಮ ಅಣ್ಣಂದಿರನ್ನು ಹುಡು ಕಲು ಹೊರಟ. ಅವನನ್ನು ಕಂಡಾಗ ಅವರಿಗೆ ನಗು ಬಂದಿತು. ದೊಡ್ಡವರೂ ಬುದ್ಧಿವಂತರೂ ಆದ ತಮ್ಮಿಂದಲೇ ಜಗತ್ತಿನಲ್ಲಿ ಸಂಚ ರಿಸುವುದು ಅಸಾಧ್ಯವಾಗಿದ್ದಾಗ, ಅವನು ಆ ಕೆಲಸವನ್ನು ಕೈಕೊಂಡಿ ದ್ದುದನ್ನು ಕಂಡು ಅವರು ಅಪಹಾಸ್ಯ ಮಾಡಿದರು. ಆದರೂ ಮೂವರೂ ಒಟ್ಟಿಗೆ ಮುಂದಕ್ಕೆ ಪ್ರಯಾಣ ಹೊರಟರು.

ಸ್ವಲ್ಪಹೊತ್ತಿನಲ್ಲಿ ಅವರು ಒಂದು ಇರುವೆಯ ಗೂಡಿನ ಹತ್ತಿರ ಬಂದರು. ಹಿರಿಯವರಿಬ್ಬರೂ ಗೂಡನ್ನು ಅಗೆದು ಆ ಇರುವೆಗಳು ಹೇಗೆ ಹೆದರಿ ಓಡಿಹೋಗುವವೆಂಬುದನ್ನು ನೋಡಬೇಕೆಂದು ಪ್ರಯತ್ನಿ ಸುವುದರಲ್ಲಿದ್ದರು. ಆದರೆ ಮೂರನೆಯವನು ಮಾತ್ರ "ಪಾಪ! ಬಡ ಪ್ರಾಣಿಗಳು! ತಮ್ಮಷ್ಟಕ್ಕೆ ತಾವು ಸುಖವಾಗಿರಲಿ! ನೀವು ಅವಕ್ಕೆ ಹಿಂಸೆ ಮಾಡಲು ನಾನು ಬಿಡುವುದಿಲ್ಲ!" ಎಂದ.

ಕೊಂಚ ದೂರ ಮುಂದೆ ನಡೆಯಲು ಅವರು ಒಂದು ಕೊಳಕ್ಕೆ ಬಂದರು. ಅದರಲ್ಲಿ ಎರಡು ಕೊಕ್ಕರೆಗಳು ಈಜುತ್ತಿದ್ದವು. ಅಣ್ಣ ತಮ್ಮಂದಿರಿಬ್ಬರೂ ಆ ಕೊಕ್ಕರೆಗಳನ್ನು ಬೇಯಿಸಿ ತಿನ್ನಬೇಕೆಂದು ಅಪೇಕ್ಷೆಪಟ್ಟರು. ಆದರೆ ಮೂರನೆಯವನು "ಪಾಪ! ಬಡಜೀವಿಗಳು!

ತಮ್ಮಷ್ಟಕ್ಕೆ ತಾವು ಸಂತೋಷವಾಗಿರಲಿ! ನೀವು ಅವನ್ನು ಕೊಲ್ಲ ಕೂಡದು!" ಎಂದ.

ಅನಂತರ ಅವರು ಒಂದು ಮರದ ನೆರಳನ್ನು ಸೇರಿದರು. ಮರದ ರೆಂಬೆಯ ಮೇಲೆ ಒಂದು ಜೇನಿನ ಗೂಡಿತ್ತು. ಜೇನು ಗೂಡಿನಿಂದ ಕೆಳಗಿಳಿದು ಮರದ ಮೇಲೆಲ್ಲಾ ಹರಿಯುತ್ತಿತ್ತು. ಇಬ್ಬರು ಅಣ್ಣಂದಿರೂ ಮರದ ಕೆಳಗೆ ಬೆಂಕಿಯನ್ನು ಹೊತ್ತಿಸಿ- ಜೇನುಹುಳುಗಳನ್ನು ಕೊಂದು ತುಪ್ಪವನ್ನು ತೆಗೆದುಕೊಳ್ಳಬೇಕೆಂದು ಮಾತಾಡಿಕೊಂಡರು. ಆದರೆ ಮೂರನೆಯವನು ಅವರನ್ನು ತಡೆಗಟ್ಟಿ, "ಜೇನುಹುಳುಗಳು ಹಾಡಿ ನಲಿದಾಡುತ್ತಿವೆ. ನೀವು ಅವನ್ನು ಸುಡುವುದಕ್ಕೆ ಅವಕಾಶ ಕೊಡು ವುದಿಲ್ಲ. ಆದದ್ದಾಗಲಿ!" ಎಂದ.

ಕೊನೆಗೆ ಮೂವರೂ ಒಂದು ದೊಡ್ಡ ಅರಮನೆಗೆ ಬಂದರು. ಅದರ ಸುತ್ತಲೂ ಕೋಟೆಯಿತ್ತು. ಕೋಟೆಯ ಒಂದು ಮೂಲೆ ಯಲ್ಲಿ ಕುದುರೆಯ ಲಾಯವಿತ್ತು. ಲಾಯದಲ್ಲಿ ಉತ್ತಮ ಜಾತಿಯ ಕುದುರೆಗಳು ಕಣ್ಣಿಗೆ ಬಿದ್ದುವು. ಅವು ಜೀವಂತವಾದ ಕುದುರೆಗಳಲ್ಲ; ಅಮೃತಶಿಲೆಯ ಕುದುರೆಗಳು. ಅಲ್ಲಿ ಮನುಷ್ಯರು ಯಾರೂ ಕಾಣಿಸು ತ್ತಿರಲಿಲ್ಲ. ಆಶ್ಚರ್ಯದಿಂದ ಅವರು ಎಲ್ಲಾ ಕೊಠಡಿಗಳನ್ನೂ ಹೊಕ್ಕು ನೋಡಿದರು. ಕಡೆಗೆ ಅವರು ಒಂದು ಬಾಗಿಲಿನ ಬಳಿಗೆ ಬಂದರು. ಆ ಬಾಗಿಲಿಗೆ ಮೂರು ಬೀಗಗಳಿದ್ದವು. ಬಾಗಿಲ ಮಧ್ಯ ಭಾಗದಲ್ಲಿ ಒಂದು ಸಣ್ಣ ರಂಧ್ರವಿತ್ತು. ಅವರು ಅದರ ಮೂಲಕ ಆಚೆಯಿದ್ದ ಕೋಣೆಯಲ್ಲಿದ್ದುದನ್ನೆಲ್ಲಾ ನೋಡಬಹುದಾಗಿತ್ತು.

ಬಾಗಿಲಿನ ಆಚೆ ಇದ್ದ ಕೋಣೆಯಲ್ಲಿ ಒಬ್ಬ ಬಿಳಿಯ ಕೂದಲಿನ ಮುದುಕ ಒಂದು ಮಂಚದ ಮೇಲೆ ಕುಳಿತಿದ್ದ. ಅವರು ಒಂದೆರಡು ಸಾರಿ ಅವನನ್ನು ಕೂಗಿದರು. ಅದು ಅವನಿಗೆ ಕೇಳಿಸಲಿಲ್ಲ. ಅವರು ಹೀಗೆ ಒಂಭತ್ತು ಸಾರಿ ಕೂಗಿದ ಮೇಲೆ ಅವನು ಎದ್ದು ಬಂದು ಬಾಗಿಲು ತೆರೆದ.

ಮುದುಕ ಯಾವ ಮಾತನ್ನೂ ಆಡದೆ ಅವರನ್ನು ಬೇರೊಂದು ಕೋಣೆಗೆ ಕರೆದೊಯ್ದು, ಅಲ್ಲಿ ನಾನಾ ಬಗೆಯ ಆಹಾರ ಪದಾರ್ಥ

ಗಳು ತಟ್ಟೆಗಳಲ್ಲಿ ಸಿದ್ಧವಾಗಿದ್ದುವು. ಅವರು ಊಟ ಮುಗಿಸಿದ ನಂತರ ಆವನು ಮೂವರಿಗೂ ಬೇರೆ ಬೇರೆ ಮಲಗುವ ಕೋಣೆಗಳನ್ನು ತೋರಿಸಿಕೊಟ್ಟ.

ಮಾರನೆಯ ದಿನ ಬೆಳಗ್ಗೆ ಮುದುಕ ಹಿರಿಯ ಹುಡುಗನ ಬಳಿಗೆ ಬಂದು ಅವನನ್ನು ಒಂದು ಅಮೃತಶಿಲೆಯ ಮಣೆಯ ಹತ್ತಿರಕ್ಕೆ ಕರೆದುಕೊಂಡು ಹೋದ.

ಆ ಮಣೆಯ ಮೇಲೆ ಮೂರು ವಾಕ್ಯಗಳಿದ್ದುವು. ಆ ವಾಕ್ಯಗಳು ಆ ಅರಮನೆಯನ್ನು ಆವರಿಸಿದ್ದ ಮಾಟದ ಪ್ರಭಾವವನ್ನು ನಾಶ ಮಾಡುವ ಬಗೆಯನ್ನು ತಿಳಿಸುತ್ತಿದ್ದವು.

ಮೊದಲನೆಯ ವಾಕ್ಯ " ಕಾಡಿನಲ್ಲಿ ಜೊಂಡು ಹುಲ್ಲಿನ ಕೆಳಗೆ ರಾಜಕುಮಾರಿಗೆ ಸೇರಿದ ಒಂದು ಸಾವಿರ ರತ್ನಗಳಿವೆ. ಅವುಗಳನ್ನೆಲ್ಲಾ ಹುಡುಕಿ ತರಬೇಕು. ಸೂರ್ಯ ಮುಳುಗುವಷ್ಟರಲ್ಲಿ ಒಂದು ರತ್ನ ಕಡಿಮೆಯಿದ್ದರೂ ಹುಡುಕುವವನು ಅಮೃತಶಿಲೆಯ ಕಲ್ಲಾಗಿ ಬಿಡುವನು " ಎಂದಿತ್ತು.

ಹಿರಿಯ ಸೋದರ ಹೊರಟು ಒಂದು ದಿವಸವೆಲ್ಲಾ ರತ್ನಗಳನ್ನು ಹುಡುಕಿದ. ಆದರೆ ಸಾಯಂಕಾಲದ ವೇಳೆಗೆ ಅವನಿಗೆ ನೂರು ರತ್ನ ಕೂಡ ಸಿಕ್ಕಲಿಲ್ಲ. ಆದ್ದರಿಂದ ಮಣೆಯ ಮೇಲೆ ಬರೆದಿದ್ದಂತೆ ಅವನು ಶಿಲೆಯಾದ.

ಮಾರನೆಯ ದಿನ ಎರಡನೆಯವನು ಆ ಕೆಲಸ ಮಾಡಲು ಒಪ್ಪಿಕೊಂಡ. ಆದರೆ ಅವನೂ ಮೊದಲನೆಯವನಂತೆಯೇ ಅಪಜಯ ಹೊಂದಿದ. ಅವನಿಗೆ ದೊರೆತ ರತ್ನಗಳೂ ಒಂದೇ ಒಂದು ನೂರು ! ಆದಕಾರಣ ಅವನೂ ಶಿಲೆಯಾದ.

ಕಡೆಗೆ ಮೂರನೆಯವನ ಸರದಿ ಬಂತು. ಅವನು ಹುಲ್ಲಿನಲ್ಲಿ ಹುಡುಕಿ ನೋಡಿದ. ರತ್ನಗಳನ್ನು ಕಂಡುಹಿಡಿಯುವ ಕೆಲಸ ಅತಿ ಕಷ್ಟವೂ ಆಯಾಸಕರವೂ ಆಗಿತ್ತು. ಆದುದರಿಂದ ಅವನು ನಿರಾಸೆಗೊಂಡು ಒಂದು ಬಂಡೆಯ ಮೇಲೆ ಕುಳಿತು ಕಾಡೆಲ್ಲಾ ಪ್ರತಿಧ್ವನಿಕೊಡುವಂತೆ ಅಳತೊಡಗಿದ.

ಅವನು ಹಾಗೆ ಅಳುತ್ತಿದ್ದಾಗ ಹಿಂದೆ ಅವನು ಬದುಕಿಸಿದ್ದ ಇರುವೆಗಳ ರಾಜ ಐದು ಸಾವಿರ ಇರುವೆಗಳೊಂದಿಗೆ ಅವನ ಸಹಾಯಕ್ಕೆ ಬಂದ. ಅರೆಕ್ಷಣದಲ್ಲಿ ಆ ಇರುವೆಗಳು ರತ್ನಗಳನ್ನೆಲ್ಲಾ ಪತ್ತೆ ಮಾಡಿ ತಂದು ಅವನ ಎದುರಿಗೆ ರಾಸಿ ಹಾಕಿದವು.

ಮಣೆಯ ಮೇಲಿದ್ದ ಎರಡನೆಯ ವಾಕ್ಯ "ರಾಜಕುಮಾರಿಯ ಮಲಗುವ ಮನೆಯ ಬೀಗದ ಕೈಯನ್ನು ಕೊಳದ ನೀರಿನಿಂದ ಈಚೆಗೆ ತೆಗೆಯಬೇಕು" ಎಂದಿತ್ತು.

ಅವನು ಕೊಳದ ದಡಕ್ಕೆ ಬಂದಾಗ, ಹಿಂದೆ ಅವನು ಬದುಕಿಸಿದ್ದ ಎರಡು ಕೊಕ್ಕರೆಗಳೂ ಅಲ್ಲಿ ಈಜುತ್ತಿದ್ದುವು. ಅವು ನೀರಿನಲ್ಲಿ ಮುಳುಗಿ ಬೀಗದ ಕೈಯನ್ನು ಮೇಲಕ್ಕೆ ತಂದುಕೊಟ್ಟವು.

ಮೂರನೆಯದು ಅತ್ಯಂತ ಕಷ್ಟದ ಕೆಲಸವಾಗಿತ್ತು. ರಾಜನ ಮೂವರು ಹೆಣ್ಣು ಮಕ್ಕಳಲ್ಲಿ ಕಿರಿಯವಳು ಯಾರೆಂದು ಹೇಳಬೇಕಾಗಿದ್ದುದೇ ಆ ಕೆಲಸ. ಅವರೆಲ್ಲರೂ ಚೆಲುವೆಯರಾಗಿದ್ದರು. ಎಲ್ಲರೂ ಒಂದೇ ತರಹ ಇದ್ದರು. ಹಿರಿಯವಳು ಒಂದು ಚೂರು ಕಲ್ಲುಸಕ್ಕರೆ ತಿಂದಿದ್ದಳೆಂದೂ, ಎರಡನೆಯವಳು ಸ್ವಲ್ಪ ಪಾನಕವನ್ನೂ ಮೂರನೆಯವಳು ಒಂದು ಪುಟ್ಟ ಸೌಟು ಜೇನುತುಪ್ಪವನ್ನೂ ಕುಡಿದಿದ್ದರೆಂದೂ ಆ ಮುದುಕ ಅವನಿಗೆ ಹೇಳಿದ.

ಆಗ ಹಿಂದೆ ಇವನು ಬದುಕಿಸಿದ್ದ ಜೇನು ಹುಳುಗಳ ರಾಣಿ ಅಲ್ಲಿಗೆ ಬಂದಿತು. ಅದು ಆ ರಾಜಕುಮಾರಿಯರ ತುಟಿಗಳೆಲ್ಲವನ್ನೂ ಪರೀಕ್ಷಿಸಿ ನೋಡಿ, ಕೊನೆಗೆ ಜೇನುತುಪ್ಪ ತಿಂದಿದ್ದವಳ ತುಟಿಯ ಮೇಲೆ ಕುಳಿತುಕೊಂಡಿತು. ಅವಳೇ ಕಿರಿಯವಳೆಂದು ಅವನಿಗೆ ಕೂಡಲೆ ಗೊತ್ತಾಯಿತು.

ಹೀಗೆ ಅರಮನೆಯನ್ನು ಮುಸುಕಿದ್ದ ಮಾಟ ಮಾಯವಾಯಿತು. ಕಲ್ಲಾಗಿದ್ದವರೆಲ್ಲರೂ ತಮ್ಮ ಮೊದಲಿನ ಸ್ವರೂಪಗಳನ್ನು ಪಡೆದರು. ಅತ್ಯಂತ ಸುಂದರಿಯಾದ ಕಿರಿಯ ರಾಜಕುಮಾರಿ ಮೂರನೆಯ ರಾಜಕುಮಾರನನ್ನೇ ಮದುವೆಯಾದಳು. ಅವನ ಅಣ್ಣಂದಿರು, ಕಲ್ಲಾಗಿ ಮತ್ತೆ ಮನುಷ್ಯರಾಗಿದ್ದವರು, ಉಳಿದಿಬ್ಬರು ರಾಜಕುಮಾರಿಯರ ಕೈ ಹಿಡಿದರು.

# ಕುಣಿಯುವ ರಾಜಕುಮಾರಿಯರು

ಒಂದಾನೊಂದು ಕಾಲದಲ್ಲಿ ಒಬ್ಬ ರಾಜಕುಮಾರನಿದ್ದ. ಅವನಿಗೆ ಹನ್ನೆರಡು ಮಂದಿ ಚೆಲುವೆಯರಾದ ಹೆಣ್ಣುಮಕ್ಕಳಿದ್ದರು. ಎಲ್ಲರೂ ಪ್ರಾಯದ ಹುಡುಗಿಯರು. ಆದಕಾರಣ ತಂದೆಯ ಅಪ್ಪಣೆಯಿಲ್ಲದೆ ಅರಮನೆಯನ್ನು ಬಿಟ್ಟುಹೋಗಕೂಡದೆಂದು ಅವರಿಗೆ ರಾಜ ಕಟ್ಟುಮಾಡಿದ್ದ. ರಾತ್ರಿ ಅವರೆಲ್ಲರೂ ಒಂದೇ ಕೋಣೆಯಲ್ಲಿ ಮಲಗುತ್ತಿದ್ದರು. ಅವರ ಹಾಸುಗೆಗಳು ಒಂದರ ಮಗ್ಗುಲಲ್ಲಿ ಒಂದರಂತಿದ್ದವು. ಪ್ರತಿ ರಾತ್ರಿಯೂ ಅವರು ಮಲಗಿದ ಒಡನೆಯೇ ರಾಜನೇ ಆ ಕೋಣೆಯ ಬಾಗಿಲಿಗೆ ಬೀಗ ಹಾಕುತ್ತಿದ್ದ. ಬೆಳಗ್ಗೆ ಅವನೇ ಬಂದು ಬೀಗ ತೆಗೆಯುತ್ತಿದ್ದ. ಬೀಗದಕೈಯನ್ನು ಇನ್ನೊಬ್ಬರ ವಶಕ್ಕೆ ಕೊಡುವುದಕ್ಕೆ ಅವನಿಗೆ ಅಪನಂಬಿಕೆ. ಹೀಗೆ ರಾಜನಿಗೆ ಗೊತ್ತಿಲ್ಲದೆ ರಾಜಕುಮಾರಿಯರು ಎಲ್ಲೂ ಒಂದು ಹೆಜ್ಜೆ ಕೂಡ ಅಡ್ಡಾಡುವ ಹಾಗಿರಲಿಲ್ಲ.

ಆದರೂ ಒಂದು ಆಶ್ಚರ್ಯ ನಡೆಯುತ್ತಿತ್ತು. ರಾಜಕುಮಾರಿಯರು ಪಾದಗಳಿಗೆ ಮೆಟ್ಟುಕೊಳ್ಳುತ್ತಿದ್ದ ಜೋಡುಗಳು ಬಹಳ ಬೇಗ ಸವೆದು ಹೋಗುತ್ತಿದ್ದವು. "ಆಚೆ ಕಾಲಿಡುವುದಿಲ್ಲ, ಒಂದು ವೇಳೆ ಎಲ್ಲಾದರೂ ಹೋದರೂ ಕುದುರೆಯ ಗಾಡಿಗಳಲ್ಲಿ ಕುಳಿತು ಹೋಗುತ್ತಾರೆ ; ಅರಮನೆಯ ಒಳಗಡೆ ಓಡಾಡುವಾಗ ನೆಲದ ಮೇಲೆ ಕೂಡ ನಡೆಯುವುದಿಲ್ಲ, ಕೋಣೆ ಕೋಣೆಗಳಲ್ಲೂ ಮೆತ್ತನೆಯ ರತ್ನ ಕಂಬಳಿ ಹಾಸಿದೆ : ಹೀಗಿದ್ದರೂ ಇವರ ಜೋಡುಗಳೇಕೆ ಇಷ್ಟು ಬೇಗ ಸವೆಯುತ್ತವೆ ?" ಎಂದು ಅವನು ಎಷ್ಟೋಸಾರಿ ತನ್ನಲ್ಲಿ ತಾನೇ ಯೋಚಿಸುತ್ತಿದ್ದ.

ಒಂದುದಿನ ರಾತ್ರಿ ಇದ್ದಕ್ಕಿದ್ದ ಹಾಗೆಯೇ ಭೋರನೆ ಮಳೆ ಸುರಿಯಿತು. ಸಿಡಿಲು ಮಿಂಚುಗಳ ಗಲಭೆಗೆ ಎಂತಹ ಶೂರನ ಎದೆಯಾದರೂ ತಲ್ಲಣಿಸುವಂತಿತ್ತು. ರಾಜಕುಮಾರಿಯರು–ಎಷ್ಟಾದರೂ

ಹೆಣ್ಣುಗಳು—ಹೆದರಿಯಾರು ಎಂದು ರಾಜ ಎದ್ದು ಅವರು ಮಲಗುತ್ತಿದ್ದ ಕೋಣೆಗೆ ಬಂದ. ಅಲ್ಲಿ ನೋಡುತ್ತಾನೆ—ಒಂದು ಸೊಳ್ಳೆಯೂ ಇರಲಿಲ್ಲ. ಹಾಸಿದ್ದ ಹಾಸುಗೆಗಳು ಹಾಸಿದ್ದಂತೆಯೇ ಇದ್ದವು. ಹುಡುಗಿಯರು ಮಾತ್ರ ಮಾಯವಾಗಿದ್ದರು. ರಾಜ ಮೊದಲಿದ್ದ ಹಾಗೆಯೇ ಕೋಣೆಗೆ ಬೀಗಹಾಕಿ ಹಿಂದಿರುಗಿದ. ಬೆಳಗಾಗುವ ಹೊತ್ತಿಗೆ ರಾಜಕುಮಾರಿಯರೆಲ್ಲಾ ತಮ್ಮ ತಮ್ಮ ಹಾಸುಗೆಗಳಲ್ಲಿ ಗಾಢನಿದ್ದೆಯಲ್ಲಿ ಮುಳುಗಿದ್ದರು.

ರಾಜ ಮತ್ತೆ ಮತ್ತೆ ಪರೀಕ್ಷೆ ಮಾಡಿದ. ಪ್ರತಿರಾತ್ರಿಯೂ ಹೀಗೆ ನಡೆಯಿತು.

ರಾಜನ ಅನುಮಾನ ಸ್ಥಿರಪಟ್ಟಿತು. ರಾಜಕುಮಾರಿಯರು ರಾತ್ರಿಯ ಹೊತ್ತಿನಲ್ಲಿ ಯಾರಿಗೂ ಗೊತ್ತಿಲ್ಲದಂತೆ ಯಾವುದೋ ದೂರದ ಸ್ಥಳಕ್ಕೆ ಹೋಗಿ ನಡೆದು ಕುಣಿದು ಬರುತ್ತಿದ್ದರೆಂದೂ ಅದುದರಿಂದಲೇ ಅವರ ಜೋಡುಗಳು ಅಷ್ಟು ಬೇಗ ಸವೆದು ಹೋಗುತ್ತಿದ್ದವೆಂದೂ ಅವನು ತೀರ್ಮಾನಿಸಿದ.

ಕಡೆಗೆ ರಾಜ ಒಂದು ಪ್ರಕಟನೆ ಹೊರಡಿಸಿದ. ಅದರಲ್ಲಿ ರಾತ್ರಿ ವೇಳೆ ರಾಜಕುಮಾರಿಯರು ಎಲ್ಲಿಗೆ ಹೋಗುವರು, ಯಾರೊಡನೆ ಕುಣಿಯುವರು ಎಂಬುದನ್ನು ಕಂಡುಹಿಡಿದವನಿಗೆ ಅವರಲ್ಲಿ ಅವನು ಅಪೇಕ್ಷಿಸಿದವಳನ್ನು ಕೊಟ್ಟು ಮದುವೆ ಮಾಡುವುದಾಗಿಯೂ, ಮತ್ತು ಈಗಿನ ರಾಜನ ಅನಂತರ ಆ ಅಳಿಯನಿಗೇ ರಾಜ್ಯ ದೊರೆಯುವುದಾಗಿಯೂ ಹೇಳಿಕೆಯಿತ್ತು. ಆದರೆ ಯಾರು ಪ್ರಯತ್ನ ಮಾಡಿ ಮೂರು ದಿನ ಹಗಲು ರಾತ್ರಿಗಳೊಳಗೆ ಜಯಶಾಲಿಯಾಗುತ್ತಿರಲಿಲ್ಲವೋ ಅಂತಹವನು ಮರಣದಂಡನೆಗೆ ಗುರಿಯಾಗಬೇಕಾಗಿತ್ತು.

ಒಂದೆರಡು ದಿನಗಳಲ್ಲೇ ಒಬ್ಬ ರಾಜನ ಮಗ ಬಂದ. ಅವನಿಗೆ ಸುಸ್ವಾಗತ ಸಿಕ್ಕಿತು. ಸಂಜೆ ಅವನನ್ನು ರಾಜಕುಮಾರಿಯರು ಮಲಗುತ್ತಿದ್ದ ಪಕ್ಕದ ಕೋಣೆಗೆ ಕರೆದೊಯ್ದರು. ಅವನು ಆ ಕೋಣೆಯಲ್ಲಿ ಕುಳಿತು ರಾಜಕುಮಾರಿಯರು ರಾತ್ರಿ ಎಲ್ಲಿಗೆ ಹೋಗಿಬರುತ್ತಿದ್ದರೆಂಬುದನ್ನು ಕಂಡುಹಿಡಿಯಬೇಕಾಗಿತ್ತು. ನಡೆಯುತ್ತಿದ್ದುದನ್ನು ನೋಡಲು

ಅವನಿಗೆ ಅನುಕೂಲವಾಗುವಂತೆ ಅವನ ಕೋಣೆಗೂ ರಾಜಕುಮಾರಿಯ ಕೋಣೆಗೂ ಮಧ್ಯೆ ಇದ್ದ ಬಾಗಿಲನ್ನು ತೆರೆದೇ ಇದ್ದರು.

ಆದರೆ ಅವನಿಗೆ ಬೇಗ ನಿದ್ದೆ ಬಂದುಬಿಟ್ಟಿತು. ಅವನು ಬೆಳಗ್ಗೆ ಎದ್ದು ನೋಡಲು ರಾಜಕುಮಾರಿಯರೆಲ್ಲಾ ತಮ್ಮ ತಮ್ಮ ಹಾಸುಗೆಗಳಲ್ಲಿ ಬೆಚ್ಚಗೆ ಮಲಗಿದ್ದರು. ರಾತ್ರಿ ಅವರು ಎಲ್ಲಿಗೆ ಹೋಗಿದ್ದರೆಂಬುದರ ಸುಳಿವು ಕೂಡ ಅವನಿಗೆ ಗೋಚರವಾಗಲಿಲ್ಲ. ಅವರ ಜೋಡುಗಳ ಅಟ್ಟೆಗಳು ಮಾತ್ರ ಎಂದಿಗಿಂತಲೂ ಹೆಚ್ಚಾಗಿಯೇ ಸವೆದಿದ್ದವು.

ಎರಡನೆಯ ರಾತ್ರಿಯೂ ಮೂರನೆಯ ರಾತ್ರಿಯೂ ಆ ರಾಜಕುಮಾರನ ಪಾಡು ಮೊದಲಿನ ದಿನದಂತೆಯೇ ಆಯಿತು. ಆದುದರಿಂದ ರಾಜ ಅವನ ತಲೆಯನ್ನು ಕತ್ತರಿಸಿ ಹಾಕಬೇಕೆಂದು ಅಪ್ಪಣೆ ಮಾಡಿದ.

ಅವನ ಅನಂತರ ಇನ್ನೂ ಅನೇಕರು ಬಂದರು. ಅವರ ಅದೃಷ್ಟವೂ ಇಷ್ಟೇ ಆಯಿತು. ಎಲ್ಲರೂ ಇದೇ ರೀತಿ ಪ್ರಾಣ ಕಳೆದುಕೊಂಡರು.

ಆಗ ಒಂದು ದಿನ ಆ ರಾಜ್ಯಕ್ಕೆ ಒಬ್ಬ ಸೈನಿಕ ಬಂದ. ಅವನಿಗೆ ಯುದ್ಧದಲ್ಲಿ ಗಾಯವಾಗಿದ್ದುದರಿಂದ ಈಗ ಕಾದಾಡಲು ಆಗುತ್ತಿರಲಿಲ್ಲ

ಅವನು ದಾರಿಯಲ್ಲಿ ಬರುತ್ತಿದ್ದಾಗ ಒಬ್ಬ ಮುದಿ ಹೆಂಗಸನ್ನು ಕಂಡ. ಅವಳು ಅವನನ್ನು "ಎಲ್ಲಿಗೆ ಹೋಗುತ್ತಿರುವೆ?" ಎಂದು ಕೇಳಿದಳು.

ಸೈನಿಕ "ನಾನು ಎಲ್ಲಿಗೆ ಹೋಗುತ್ತಿದ್ದೇನೆ, ಏನು ಮಾಡಬೇಕು ಎಂಬುದು ನನಗೇ ಗೊತ್ತಿಲ್ಲ. ಆದರೂ ಆ ರಾಜಕುಮಾರಿಯರು ರಾತ್ರಿ ಎಲ್ಲಿಗೆ ಹೋಗಿಬರುತ್ತಾರೆ, ಎಲ್ಲಿ ಕುಣಿತ ಮಾಡುತ್ತಾರೆ, ಎಂಬುದನ್ನು ಕಂಡುಹಿಡಿಯಬೇಕೆಂದು ನನಗೆ ಹುಚ್ಚು! ಹಾಗೆ ಮಾಡಿದರೆ ನಾನೂ ಒಂದು ದಿನ ರಾಜನಾಗಬಹುದು ಎಂದು ತನ್ನನ್ನು ತಾನೇ ಹಾಸ್ಯಮಾಡಿಕೊಂಡು ನಕ್ಕ.

ಮುದುಕಿ "ಆಗಬಹುದು. ಅದೇನೂ ಕಷ್ಟದ ಕೆಲಸವಲ್ಲ. ಸಾಯಂಕಾಲ ರಾಜಕುಮಾರಿಯರಲ್ಲಿ ಒಬ್ಬಳು ನಿನಗೆ ಕುಡಿಯುವುದಕ್ಕೆಂದು ಒಂದು ಬಟ್ಟಲು ಮದ್ಯ ತಂದು ಕೊಡುತ್ತಾಳೆ. ಅದನ್ನು ಮಾತ್ರ ಒಂದು ತೊಟ್ಟನ್ನೂ ಬಾಯಿಗೆ ಹಾಕಬೇಡ. ಅವಳು ನಿನ್ನ ಕೋಣೆಯನ್ನು ಬಿಟ್ಟು ಹೊರಟ ಕೂಡಲೆ ನಿದ್ದೆ ಹೋಗುವವನಂತೆ ನಟಿಸಿ ಬಿಡು" ಎಂದು ಸಲಹೆ ಕೊಟ್ಟಳು.

ಅನಂತರ ಅವಳು ಅವನಿಗೆ ಒಂದು ನಿಲುವಂಗಿಯನ್ನು ದಾನ ಮಾಡಿ "ಇದನ್ನು ತೊಟ್ಟಕೂಡಲೆ ನೀನು ಕಣ್ಣಿಗೆ ಕಾಣದಂತಾಗುವೆ. ಆಗ ರಾಜಕುಮಾರಿಯರು ಎಲ್ಲಿಗೆ ಹೋದರೂ ನೀನು ಅವರನ್ನು ಹಿಂಬಾಲಿಸಬಹುದು" ಎಂದಳು.

ಸೈನಿಕ ಈ ಬುದ್ಧಿವಾದದ ಮಾತುಗಳನ್ನು ಕೇಳಿದಾಗ ತನ್ನ ಅದೃಷ್ಟವನ್ನು ಒಂದುಸಾರಿ ಪರೀಕ್ಷಿಸಿಯೇ ಬಿಡಬೇಕೆಂದು ನಿರ್ಧರಿಸಿದ. ಅದರಂತೆಯೇ ಅವನು ರಾಜನ ಬಳಿಗೆ ಹೋಗಿ "ರಾಜಕುಮಾರಿಯರು ನಿತ್ಯವೂ ರಾತ್ರಿ ಎಲ್ಲಿಗೆ ಹೋಗುತ್ತಾರೆ ಎಂಬುದನ್ನು ನಾನು ಕಂಡುಹಿಡಿಯುತ್ತೇನೆ" ಎಂದ.

ಇತರರಿಗೆ ದೊರೆತಿದ್ದ ಸ್ವಾಗತವೇ ಇವನಿಗೂ ದೊರೆಯಿತು. ಅವನಿಗೆ ಒಳ್ಳೆಯ ರಾಜಯೋಗ್ಯವಾದ ಬಟ್ಟೆ ಬರೆಗಳನ್ನು ಕೊಡಬೇಕೆಂದು ರಾಜ ತನ್ನ ಅಧಿಕಾರಿಗಳಿಗೆ ಅಪ್ಪಣೆ ಮಾಡಿದ.

ಸಂಜೆ ಅವನನ್ನು ರಾಜಕುಮಾರಿಯರ ಕೊಠಡಿಯ ಪಕ್ಕದ ಕೋಣೆಗೆ ಕರೆದೊಯ್ದರು. ಅವನು ಮಲಗುವ ಮೊದಲು ರಾಜಕುಮಾರಿಯರಲ್ಲಿ ಹಿರಿಯವಳು ಅವನಿಗೆ ಒಂದು ಬಟ್ಟಲು ಮದ್ಯ ತಂದುಕೊಟ್ಟಳು.

ಸೈನಿಕ ಮುದುಕಿಯ ಸೂಚನೆಗಳನ್ನು ಮರೆಯದೆ ನೆನಪಿನಲ್ಲಿಟ್ಟುಕೊಂಡಿದ್ದ. ಆದ್ದರಿಂದ ಆ ಮದ್ಯವನ್ನು ಕುಡಿಯದೆ ಎಲ್ಲವನ್ನೂ ಎಚ್ಚರಿಕೆಯಿಂದ ಗುಟ್ಟಾಗಿ ಚೆಲ್ಲಿಬಿಟ್ಟ.

ಸ್ವಲ್ಪ ಹೊತ್ತಿನಲ್ಲೇ ಅವನು ಗಾಢನಿದ್ರೆ ಬಂದವನಂತೆ ಗಟ್ಟಿಯಾಗಿ ಗೊರಕೆಹಾಕತೊಡಗಿದ. ಹನ್ನೆರಡು ಜನ ರಾಜಕುಮಾರಿ

ಯರೂ ಇದನ್ನು ಕೇಳಿದಾಗ ಸಂತೋಷದಿಂದ ನಕ್ಕರು. ಹಿರಿಯುವಳು "ಇವನಿಗೂ ಈರೀತಿ ಪ್ರಾಣ ಕಳೆದುಕೊಳ್ಳುವುದರ ಬದಲು ಬೇರೆ ಕೆಲಸವಿಲ್ಲವೆಂದು ಕಾಣುತ್ತದೆ" ಎಂದಳು.

ಅನಂತರ ಅವರೆಲ್ಲರೂ ಮೇಲಕ್ಕೆದ್ದು ತಮ್ಮ ತಮ್ಮ ಪೆಟ್ಟಿಗೆಗಳನ್ನು ತೆರೆದು ಅತ್ಯಂತ ಸೊಗಸಾದ ಬಟ್ಟೆಗಳನ್ನು ಹೊರಗೆಳೆದರು. ಕನ್ನಡಿಗಳ ಮುಂದೆ ನಿಂತು ಅವನ್ನು ಧರಿಸಿಕೊಂಡರು. ಕುಣಿತವನ್ನು ಆರಂಭಿಸಿಬಿಡಲು ಉತ್ಸಾಹದಿಂದಿರುವಂತೆ ನೆಗೆದಾಡತೊಡಗಿದರು.

ಆಗ ಕಿರಿಯುವಳು "ನೀವೆಲ್ಲಾ ಸಂತೋಷದಿಂದಿರುವಿರಿ. ನನಗೇಕೋ ಹೆದರಿಕೆಯಾಗುತ್ತಿದೆ. ನಮಗೆ ಈ ದಿನ ಏನಾದರೂ ತೊಂದರೆಯಾಗುವುದು ಖಂಡಿತ" ಎಂದಳು.

ಅವಳ ಮಾತನ್ನು ಕೇಳಿ ಇತರರು ಬೇಸರಗೊಂಡರು. ಅವಳ ಪಿರಿಕಿತನವನ್ನು ಕಂಡು ಅವರಿಗೆ ಬಹಳ ನಗು ಬಂತು.

ಹಿರಿಯುವಳು "ಅಯ್ಯೋ, ಹುಚ್ಚಿ! ನೀನು ಯಾವಾಗಲೂ ಹೀಗೆ ಹೆದರುತ್ತಲೇ ಇರುತ್ತೀಯ! ಎಷ್ಟು ಜನ ರಾಜಪುತ್ರರು ನಮ್ಮ ಮೇಲೆ ಹೊಂಚಿಟ್ಟು ಪ್ರಾಣ ಕಳೆದುಕೊಂಡರೆಂಬುದನ್ನು ಮರೆತುಬಿಟ್ಟೆಯ? ಈ ಸೈನಿಕ ಶುದ್ಧ ಶುಂಠ! ನೋಡಲ್ಲಿ—ಕೋಣನ ಹಾಗೆ ಬಿದ್ದಿದ್ದಾನೆ! ನಾನು ಅವನಿಗೆ ನಿದ್ರಾರಸವನ್ನು ಕೊಡದಿದ್ದರೂ ಅವನು ಮೈಮೇಲೆ ಎಚ್ಚರವಿಲ್ಲದೆ ಮಲಗುತ್ತಿದ್ದ! ಅಂಥ ಬುದ್ಧಿವಂತ ಮಹರಾಯ! ಈ ಕತ್ತೆಗಳೆಲ್ಲಾ ಏಕೆ ಬರುತ್ತವೆಯೋ ಇಲ್ಲಿಗೆ! ಪಾಪ!" ಎಂದುಬಿಟ್ಟಳು.

ಅವರೆಲ್ಲರೂ ಸಿದ್ಧರಾದಾಗ, ಒಟ್ಟಿಗೆ ಹೋಗಿ ಒಮ್ಮೆ ಸೈನಿಕನನ್ನು ನೋಡಿದರು. ಅವನು ಗೊರಕೆ ಹೊಡೆಯುತ್ತ ಕೈಕಾಲು ಅಲ್ಲಾಡಿಸದೆ ಬಿದ್ದಿದ್ದ. ಆದುದರಿಂದ ಅವರು ತಮಗೆ ಯಾವ ಅಪಾಯವೂ ಇಲ್ಲವೆಂದು ಭಾವಿಸಿ ತಮ್ಮ ಕೊಠಡಿಗೆ ಹಿಂತಿರುಗಿದರು.

ಹಿರಿಯುವಳು ತನ್ನ ಹಾಸುಗೆಯ ಬಳಿಗೆ ಹೋಗಿ ಚಪ್ಪಾಳೆ ತಟ್ಟಿದಳು. ತಕ್ಷಣ ಹಾಸುಗೆ ನೆಲದೊಳಕ್ಕೆ ಕುಸಿದುಹೋಯಿತು.

ಹಾಗೆಯೇ ಅಲ್ಲೊಂದು ಸಣ್ಣ ಬಾಗಿಲು ತೆರೆದುಕೊಂಡಿತು. ಅವರು ಒಬ್ಬಳ ಹಿಂದೆ ಒಬ್ಬಳಂತೆ ಆ ಬಾಗಿಲ ಮೂಲಕ ಇಳಿದು ಹೋಗ ತೊಡಗಿದರು. ಹಿರಿಯುವಳು ಎಲ್ಲರಿಗಿಂತ ಮುಂದೆ ನಡೆದು ಇತರರಿಗೆ ದಾರಿ ತೋರಿಸುತ್ತಿದ್ದಳು.

ಇದನ್ನೆಲ್ಲಾ ಸೈನಿಕ ನೋಡಿದ. ಇನ್ನು ಕಾಲ ಕಳೆಯಬಾರ ದೆಂದು ನಿಶ್ಚಯಿಸಿ, ಅವನು ಮುದುಕಿ ತನಗೆ ಕೊಟ್ಟಿದ್ದ ನಿಲುವಂಗಿ ಯನ್ನು ತೊಟ್ಟು ಅವರ ಹಿಂದೆ ಓಡಿದ.

ಅರ್ಧ ಮೆಟ್ಟಿಲುಗಳನ್ನು ಇಳಿದಿದ್ದಾಗ ಅವನು ಒಂದು ಸಾರಿ ಕಿರಿಯ ರಾಜಕುಮಾರಿಯ ಸೀರೆಯ ಕೊನೆಯನ್ನು ತುಳಿದುಬಿಟ್ಟ. ಅವಳು "ಅಯ್ಯೋ ಯಾರೋ ನನ್ನ ಸೀರೆಯನ್ನು ಹಿಡಿದುಕೊಂಡರು!" ಎಂದು ಕಿರಿಚಿದಳು.

ಹಿರಿಯುವಳು "ಹುಚ್ಚಿ! ಬಾ ಸುಮ್ಮನೆ! ಗೋಡೆಯಲ್ಲಿರುವ ಮೊಳೆ ತಗಲಿತೇನೋ, ಅದಕ್ಕೇ ಎಷ್ಟು ಹಗರಣ ಮಾಡುತ್ತಾಳೆ!" ಎಂದು ಮುಂದೆ ಮುಂದೆ ಹೋಗಿಯೇ ಬಿಟ್ಟಳು.

ಎಲ್ಲರೂ ಕೆಳಗಿಳಿದು ನಡೆದರು. ಮೆಟ್ಟಲುಗಳನ್ನೆಲ್ಲಾ ಇಳಿದು ನಂತರ ಅವರು ಒಂದು ಅತ್ಯಂತ ಸುಂದರವಾದ ಮರಗಳ ತೋಪಿನಲ್ಲಿ ಬಂದು ನಿಂತರು. ಆ ಮರಗಳ ಎಲೆಗಳೆಲ್ಲಾ ಬೆಳ್ಳಿಯ ಎಲೆಗಳು! ಅವು ಸುಂದರವಾಗಿ ಥಳಥಳಿಸಿ ಹೊಳೆಯುತ್ತಿದ್ದವು. ಸೈನಿಕನಿಗೆ ತಾನು ಅಲ್ಲಿಗೆ ಬಂದುದಕ್ಕೆ ಗುರುತಾಗಿ ಏನಾದರೊಂದು ಪದಾರ್ಥ ವನ್ನು ಒಯ್ಯಬೇಕು ಎನ್ನಿಸಿತು. ಆದ್ದರಿಂದ ಅವನು ಒಂದು ಸಣ್ಣ ಕೊಂಬೆಯನ್ನು ಮುರಿದ. ಮರದಲ್ಲಿ ದೊಡ್ಡ ಶಬ್ದವಾಯಿತು.

ಕಿರಿಯ ಹುಡುಗಿ ಮತ್ತೆ "ಈವತ್ತು ಏನೋ ಸರಿಯಾಗಿಲ್ಲ ವೆಂದೇ ನನ್ನ ನಂಬಿಕೆ. ನೀವು ಆ ಶಬ್ದ ಕೇಳಲಿಲ್ಲವೆ? ಅಂಥ ಶಬ್ದ ಮೊದಲು ಎಂದೂ ಬಂದಿರಲಿಲ್ಲ!" ಎಂದಳು.

ಆದರೆ ಹಿರಿಯುವಳು "ಏನೂ ಇಲ್ಲ! ನಮ್ಮ ರಾಜಕುಮಾರರು ನಾವು ಬರುವುದನ್ನೇ ಎದುರುನೋಡುತ್ತ ಸಂತೋಷದಿಂದ ಹಾಗೆ ಕೂಗಾಡುತ್ತಿದ್ದಾರೆ" ಎಂದುಬಿಟ್ಟಳು.

ಅನಂತರ ಅವರು ಇನ್ನೊಂದು ಮರಗಳ ತೋಪಿಗೆ ಬಂದರು. ಅಲ್ಲಿ ಇದ್ದುದೆಲ್ಲಾ ಚಿನ್ನದ ಎಲೆಗಳು. ಇದಾದ ಮೇಲೆ ಮತ್ತೊಂದು ತೋಪು ಸಿಕ್ಕಿತು. ಇಲ್ಲಿಯ ಮರಗಳಲ್ಲಿ ಹೊಳೆಹೊಳೆಯುವ ವಜ್ರಗಳೇ ಎಲೆಗಳಾಗಿದ್ದವು. ಸೈನಿಕ ಒಂದೊಂದರಲ್ಲೂ ಒಂದು ಪುಟ್ಟ ರೆಂಬೆಯನ್ನು ಕಿತ್ತು ತನ್ನ ನಿಲುವಂಗಿಯಲ್ಲಿ ಮುಚ್ಚಿಟ್ಟುಕೊಂಡ.

ಅವನು ಹಾಗೆ ಕಿತ್ತಾಗಲೆಲ್ಲಾ ಗಟ್ಟಿಯಾಗಿ ಸದ್ದಾಗುತ್ತಿತ್ತು. ಆಗ ಕಿರಿಯ ರಾಜಕುಮಾರಿ ಹೆದರಿಕೆಯಿಂದ ನಡುಗುತ್ತಿದ್ದಳು. ಆದರೆ ಹಿರಿಯವಳು ಮಾತ್ರ ಆ ಸದ್ದು ತಾವು ಬರುವುದನ್ನೇ ಎದುರು ನೋಡುತ್ತಿದ್ದ ರಾಜಕುಮಾರರ ಕೂಗಾಟದಿಂದ ಉಂಟಾಗುತ್ತಿದ್ದಿತೆಂದು ಹೇಳುತ್ತಿದ್ದಳು.

ಹೀಗೆ ಅವರು ಮುಂದೆ ನಡೆದರು. ಎಷ್ಟೋ ದೂರ ಕಳೆದ ನಂತರ ಅವರ ಎದುರಿಗೆ ಒಂದು ದೊಡ್ಡ ಸರೋವರ ಸಿಕ್ಕಿತು. ಅದರ ದಡದ ಬಳಿ ಹನ್ನೆರಡು ದೋಣಿಗಳಿದ್ದವು. ಅವುಗಳಲ್ಲಿ ಹನ್ನೆರಡು ಜನ ಸುಂದರರಾದ ರಾಜಕುಮಾರರಿದ್ದರು. ಅವರೆಲ್ಲರೂ ಈ ರಾಜಕುಮಾರಿಯರಿಗಾಗಿ ಕಾದಿರುವಂತೆ ಕಂಡುಬಂದರು.

ಒಂದೊಂದು ದೋಣಿಗೆ ಒಬ್ಬ ರಾಜಕುಮಾರಿ ಹೋದಳು. ಸೈನಿಕ ಕಿರಿಯ ರಾಜಕುಮಾರಿ ಕುಳಿತುಕೊಂಡ ದೋಣಿಯೊಳಕ್ಕೆ ಹೋದ. ರಾಜಕುಮಾರರು ದೋಣಿಗಳನ್ನು ನಡೆಸತೊಡಗಿದರು. ದೋಣಿಗಳು ನೀರಿನ ಮೇಲೆ ಸ್ವಲ್ಪ ದೂರ ಹೋದಾಗ, ಕಿರಿಯ ರಾಜಕುಮಾರಿಯೂ ಸೈನಿಕನೂ ಕುಳಿತಿದ್ದ ದೋಣಿಯನ್ನು ನಡೆಸುತ್ತಿದ್ದ ರಾಜಕುಮಾರ " ಏಕೋ ಕಾಣೆ, ನನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಜಲ್ಲೆ ಹಾಕುತ್ತಿದ್ದೇನೆ. ಆದರೂ ದೋಣಿ ಎಂದಿನಂತೆ ವೇಗವಾಗಿ ಹೋಗುತ್ತಿಲ್ಲ. ಕೈಗಳೆಲ್ಲಾ ಸೋತುಬಿದ್ದವು. ದೋಣಿ ಈ ದಿನ ಬಹಳ ಭಾರವಾಗಿರುವಂತೆ ತೋರುತ್ತಿದೆ ! " ಎಂದ.

ರಾಜಕುಮಾರಿ " ಆಯಾಸದಿಂದ ಹಾಗೆ ಆಗುತ್ತದೆ " ಎಂದಳು.

ಸರೋವರದ ಆಚೆಯ ದಡದ ಮೇಲೆ ಸೊಗಸಾದ ಒಂದು ಅರಮನೆಯಿತ್ತು. ಅದನ್ನು ಕೋಟಿಗಟ್ಟಲೆ ದೀಪದಿಂದ ಅಲಂಕರಿಸಿ

ದ್ದರು. ಅದರ ಒಳಭಾಗದಿಂದ ಮನೋಹರವೂ ಸಂತೋಷಕರವೂ ಆದ ಸಂಗೀತ ಕೇಳಿ ಬರುತ್ತಿತ್ತು.

ಅವರೆಲ್ಲರೂ ಅಲ್ಲಿ ಇಳಿದು ಅರಮನೆಯೊಳಕ್ಕೆ ನಡೆದರು. ಅಲ್ಲಿ ರಾಜಕುಮಾರರೆಲ್ಲರೂ ತಮ್ಮ ತಮ್ಮ ಓರಗೆಯ ರಾಜಕುಮಾರಿಯರೊಡನೆ ಕುಣಿತಮಾಡಿದರು. ಯಾರ ಕಣ್ಣಿಗೂ ಕಾಣದೆ ಅದೃಶ್ಯನಾಗಿದ್ದ ಸೈನಿಕನೂ ಕುಣಿದ. ರಾಜಕುಮಾರಿಯರು ತಮ್ಮ ಪ್ರಿಯರ ಪಕ್ಕದಲ್ಲಿ ಕುಳಿತು ಬೇಕು ಬೇಕಾದಷ್ಟು ಮದ್ಯಪಾನ ಮಾಡಿದರು. ಯಾವಳಾದರೂ ರಾಜಕುಮಾರಿ ಕುಡಿಯೋಣ ಎಂದು ಮದ್ಯವನ್ನು ಬಟ್ಟಲಲ್ಲಿಟ್ಟುಕೊಂಡಿದ್ದರೆ, ಸೈನಿಕ ಅದನ್ನು ತಾನು ಕುಡಿದುಬಿಡುತ್ತಿದ್ದ. ಅವಳು ಬಟ್ಟಲನ್ನು ಬಾಯಿಗೊಯ್ದಾಗ ಅದು ಬರಿದಾಗಿರುತ್ತಿತ್ತು.

ಇದನ್ನು ಕಂಡ ಕಿರಿಯ ಹುಡುಗಿ ಬಹಳ ಭಯಪಟ್ಟಳು. ಆದರೆ ಮತ್ತೆ ಹಿರಿಯವಳು ಅವಳನ್ನು ಗದರಿಸಿ ಸುಮ್ಮನಾಗಿಸಿದಳು.

ಅವರು ಬೆಳಗಿನ ಜಾವ ಮೂರು ಗಂಟೆಯವರೆಗೂ ನರ್ತನ ಮಾಡಿದರು. ಅಷ್ಟುಹೊತ್ತಿಗೆ ಅವರ ಜೋಡುಗಳೆಲ್ಲಾ ಸವೆದುಹೋಗಿದ್ದವು. ಆಗ ಅವರು ಕುಣಿತವನ್ನು ನಿಲ್ಲಿಸಬೇಕಾಯಿತು.

ರಾಜಕುಮಾರರು ಅವರನ್ನು ಮತ್ತೆ ದೋಣಿಗಳಲ್ಲಿ ಕೂಡಿಸಿಕೊಂಡು ಸರೋವರದ ಈಚೆಯ ದಡಕ್ಕೆ ಕರೆತಂದು ಬಿಟ್ಟರು. ರಾಜಕುಮಾರಿಯರು ತಾವು ಮಾರನೆಯ ರಾತ್ರಿ ಅಲ್ಲಿಗೆ ಪುನಃ ಬರುವುದಾಗಿ ಮಾತುಕೊಟ್ಟರು. ಈಸಾರಿ ಸೈನಿಕ ಹಿರಿಯವಳ ದೋಣಿಯಲ್ಲಿ ಕುಳಿತಿದ್ದ.

ಅವರು ಮೆಟ್ಟಲುಗಳ ಬಳಿಗೆ ಬಂದಾಗ, ಸೈನಿಕ ರಾಜಕುಮಾರಿಗಿಂತಲೂ ಮುಂಚೆಯೇ ಓಡಿಹೋಗಿ, ಏನೂ ಅರಿಯದವನಂತೆ ಮಲಗಿಬಿಟ್ಟ.

ರಾಜಕುಮಾರಿಯರು ಕುಣಿದು ಕುಣಿದು, ನಡೆದು ನಡೆದು, ದಣಿದು, ನಿಧಾನವಾಗಿ ಬಂದು ನೋಡಿದರು. ಅವನು ತನ್ನ ಹಾಸುಗೆಯಲ್ಲಿ ಗೊರಕೆ ಹೊಡೆಯುತ್ತಿದ್ದ. ಅವರು "ಈಗ ಎಲ್ಲವೂ ಕ್ಷೇಮವಾಯಿತು; ಯಾವ ಅಪಾಯವೂ ಇಲ್ಲ!" ಎಂದು

ಕೊಂಡು, ತಮ್ಮ, ತಮ್ಮ ಒಳ್ಳೆಯ ಬಟ್ಟೆಗಳನ್ನೆಲ್ಲಾ ಬಿಚ್ಚಿ ತೆಗೆದಿಟ್ಟು ಜೋಡುಗಳನ್ನು ಬಿಟ್ಟು, ಮಲಗಿದರು.

ಆ ಅದ್ಭುತವಾದ ದೃಶ್ಯಗಳನ್ನು ಇನ್ನೊಂದು ಸಾರಿ ನೋಡಿಬರ ಬೇಕೆಂದು ಸೈನಿಕನಿಗೆ ಆಸೆಯಾಯಿತು. ಆದ್ದರಿಂದ ಬೆಳಗಾದಾಗ ಅವನು ಹಿಂದಿನ ರಾತ್ರಿ ನಡೆದಿದ್ದ ಸಂಗತಿಗಳನ್ನು ಯಾರಿಗೂ ತಿಳಿಸಲಿಲ್ಲ.

ಎರಡನೆಯ ರಾತ್ರಿಯೂ ಮೂರನೆಯ ರಾತ್ರಿಯೂ ಮೊದಲನೆ ರಾತ್ರಿ ನಡೆದುದೆಲ್ಲಾ ಮತ್ತೆ ನಡೆಯಿತು. ಪ್ರತಿಸಾರಿಯೂ ರಾಜ ಕುಮಾರಿಯರು ತಮ್ಮ ಜೋಡುಗಳು ಸವೆದ ಹೋಗುವವರೆಗೂ ನಡೆದು, ಕುಣಿದು, ದಣಿದು ಹಿಂದಿರುಗಿ ಬರುತ್ತಿದ್ದರು. ಮೂರನೆಯ ರಾತ್ರಿ ತಾನು ಹೋಗಿಬಂದಿದ್ದ ಅರಮನೆಯ ಗುರುತು ತೋರಿಸುವ ಸಲುವಾಗಿ ಸೈನಿಕ ಒಂದು ಚಿನ್ನದ ಬಟ್ಟಲನ್ನು ತೆಗೆದುಕೊಂಡು ಬಂದ.

ನಾಲ್ಕನೆಯ ದಿನ ಬೆಳಗಾಯಿತು. ಸೈನಿಕ ತಾನು ಕಂಡುಹಿಡಿ ದಿದ್ದ ರಹಸ್ಯವನ್ನು ಎಲ್ಲರಿಗೂ ತಿಳಿಸಬೇಕಾದ ಕಾಲ ಬಂತು. ಆಗ ಅವನನ್ನು ರಾಜನ ಎದುರಿಗೆ ಕರೆದುಕೊಂಡು ಹೋದರು. ಹನ್ನೆರಡು ಜನ ರಾಜಕುಮಾರಿಯರೂ ಅವನು ಏನು ಹೇಳುವನೆಂದು ಕೇಳಲು ಬಾಗಿಲ ಹಿಂದೆ ಮರೆಯಾಗಿ ನಿಂತಿದ್ದರು.

ದೊರೆ "ನನ್ನ ಹನ್ನೆರಡು ಮಕ್ಕಳೂ ರಾತ್ರಿ ಎಲ್ಲಿಗೆ ಹೋಗು ತ್ತಾರೆ ? " ಎಂದು ಅವನನ್ನು ಕೇಳಿದ.

ಸೈನಿಕ "ನೆಲದ ಒಳಗಿನ ಒಂದು ಅರಮನೆಯಲ್ಲಿ ಹನ್ನೆರಡು ಜನ ರಾಜಕುಮಾರಿಯರೊಡನೆ ಕುಣಿಯುವುದಕ್ಕೆ!" ಎಂದು ಉತ್ತರ ಕೊಟ್ಟ.

ಅನಂತರ ಅವನು ನಡೆದಿದ್ದುದನ್ನೆಲ್ಲಾ ರಾಜನಿಗೆ ವಿವರಿಸಿ ಹೇಳಿ, ತಾನು ಗುರುತಿಗೆಂದು ತಂದಿದ್ದ ಕೊಂಬೆಗಳನ್ನೂ ಚಿನ್ನದ ಬಟ್ಟಲನ್ನೂ ತೋರಿಸಿದ.

ಆಗ ರಾಜ ಮಕ್ಕಳನ್ನು ಕರೆದು ಸೈನಿಕ ಹೇಳಿದ್ದುದು ನಿಜವೇ ಎಂದು ಅವರನ್ನು ಪ್ರಶ್ನಿಸಿದ.

ತಮ್ಮ ಗುಟ್ಟು ಬಯಲಾದುದನ್ನು ಕಂಡು, ಬೇರೆ ದಾರಿತೋರದೆ ಅವರು ಎಲ್ಲವನ್ನೂ ಒಪ್ಪಿಕೊಂಡರು.

ರಾಜ " ಇವರಲ್ಲಿ ನೀನು ಯಾರನ್ನು ಮದುವೆಯಾಗುವೆ ? " ಎಂದು ಸೈನಿಕನನ್ನು ಕೇಳಿದ.

ಸೈನಿಕ " ನಾನೇನೂ ಚಿಕ್ಕವನಲ್ಲ. ಆದ್ದರಿಂದ ಹಿರಿಯವಳನ್ನೇ ಮದುವೆಯಾಗುವೆ. ಅವಳಾದರೆ ವಯಸ್ಸು ಹೊಂದುತ್ತದೆ " ಎಂದ.

ಅವರಿಬ್ಬರಿಗೂ ಆ ದಿನವೇ ಮದುವೆಯಾಯಿತು. ರಾಜನ ತರುವಾಯ ಸೈನಿಕನೇ ಪಟ್ಟಕ್ಕೆ ಬಂದ.

# ಭೂತಯ್ಯನ ಕೋಳಿ

ಒಬ್ಬ ಮನುಷ್ಯನಿದ್ದ. ಅವನಿಗೆ ಮೂವರು ಮಕ್ಕಳಿದ್ದರು. ಅವರಲ್ಲಿ ಕಿರಿಯವನನ್ನು ಮನೆಯವರೆಲ್ಲಾ ಯಾವಾಗಲೂ ತಿರಸ್ಕಾರ ದಿಂದ ಕಾಣುತ್ತಿದ್ದರು. ಅವನು ನೋಡುವುದಕ್ಕೆ ಸ್ವಲ್ಪ ದೊಣ್ಣೆ ಯಾಗಿದ್ದುದರಿಂದ ಎಲ್ಲರೂ ಅವನನ್ನು "ಭೂತನಂತಿದ್ದಾನೆ" ಎಂದು ಹಾಸ್ಯ ಮಾಡುತ್ತಿದ್ದರು. ಕಡೆಗೆ ಅವನಿಗೆ ಭೂತಯ್ಯ ಎಂದೇ ಹೆಸರು ಬಿದ್ದುಹೋಯಿತು.

ಒಂದು ದಿನ ಹಿರಿಯ ಮಗ ತಾನು ಕಾಡಿಗೆ ಹೋಗಿ ಕಟ್ಟಿಗೆ ಕಡಿದು ತರುವುದಾಗಿ ಹೇಳಿದ. ಅವರ ತಾಯಿ ಅವನಿಗೆ ನಾಲ್ಕು ಸೊಗಸಾದ ಜೋಳದ ರೊಟ್ಟಿಗಳನ್ನೂ ಒಂದು ತಂಬಿಗೆಯ ತುಂಬಾ ಮೊಸರನ್ನೂ ಕೊಟ್ಟು "ಕೆಲಸ ಮಾಡಿ ಆಯಾಸವಾದಾಗ ಇವನ್ನು ತಿಂದು ಸುಧಾರಿಸಿಕೊ" ಎಂದಳು.

ಅವನು ಕಾಡಿಗೆ ಹೋದಕೂಡಲೆ ಒಬ್ಬ ಕುಳ್ಳ ಮುದುಕ ಅವನ ಎದುರಿಗೆ ಬಂದು "ಅಯ್ಯಾ, ನಮಸ್ಕಾರ; ನನಗೆ ನಿನ್ನ ರೊಟ್ಟಿ ಯಲ್ಲಿ ಒಂದು ಚೂರನ್ನೂ ಸ್ವಲ್ಪ ಮೊಸರನ್ನೂ ಕೊಡು. ಬಹಳ ಹಸಿ ವಾಗಿದೆ, ಬಹಳ ಬಾಯಾರಿದ್ದೇನೆ" ಎಂದ.

ಹುಡುಗ "ಏನು ? ನನ್ನ ರೊಟ್ಟಿಯನ್ನೂ ಹಾಲನ್ನೂ ನಿನಗೆ ಕೊಡಬೇಕೆ ? ಹೋಗಯ್ಯಾ ಹುಚ್ಚ ! ನಿನಗೆ ಕೊಟ್ಟುಬಿಟ್ಟರೆ ನನ ಗೇನು ಉಳಿಯುತ್ತದೆ ?" ಎನ್ನುತ್ತ ಹೊರಟೇ ಹೋದ.

ಸ್ವಲ್ಪ ಹೊತ್ತಿನಲ್ಲೇ ಅವನು ಮರ ಕಡಿಯಲು ಪ್ರಾರಂಭಿಸಿದ. ಆದರೆ ಅವನು ಮರಕ್ಕೆ ಹೊಡೆಯುತ್ತಿದ್ದ ಏಟುಗಳು ಗುರಿ ತಪ್ಪಿ ಒಂದು ಪೆಟ್ಟು ಅವನಿಗೇ ಬಿತ್ತು. ಅವನ ಕಾಲಿನಿಂದ ರಕ್ತ ಸೋರಲು ಮೊದಲಾಯಿತು. ಅವನು ಮನೆಗೆ ಕಟ್ಟಿಗೆ ಒಯ್ಯುವುದರ ಬದಲು ಗಾಯಕ್ಕೆ ಔಷಧ ಹಾಕಲು ಓಡಬೇಕಾಯಿತು. ಅವನನ್ನು ಕಂಡು ಮಾತಾಡಿಸಿದ್ದ ಮುದುಕನೇ ಅವನಿಗೆ ಹೀಗಾಗುವಂತೆ ಮಾಡಿದ್ದವನು.

ಮೂರನೆಯ ದಿನ ಎರಡನೆಯ ಮಗ ಕಟ್ಟಿಗೆ ಕಡಿದು ತರಲು ಕಾಡಿಗೆ ಹೊರಟ. ಅವನ ತಾಯಿ ಅವನಿಗೂ ನಾಲ್ಕು ಜೋಳದ ರೊಟ್ಟಿಗಳನ್ನೂ ಒಂದು ಸಣ್ಣ ತಂಬಿಗೆ ಮೊಸರನ್ನೂ ಕೊಟ್ಟಳು.

ಹಿಂದೆ ಬಂದಿದ್ದ ಕುಳ್ಳಮುದುಕ ಇವನ ಹತ್ತಿರವೂ ಬಂದು ತನಗೆ ಸ್ವಲ್ಪ ರೊಟ್ಟಿಯನ್ನೂ ಮೊಸರನ್ನೂ ಕೊಡಬೇಕೆಂದು ಕೇಳಿದ.

ಆದರೆ ಆ ಹುಡುಗ ತಾನು ಬಹಳ ಬುದ್ಧಿವಂತನೆಂದು ತಿಳಿದು, "ನಿನಗೆ ಕೊಟ್ಟರೆ ನನಗೇನು ಉಳಿಯುತ್ತದೆ? ನಿನ್ನ ದಾರಿ ಹಿಡಿದು ನೀನು ಹೋಗು" ಎಂದ.

ಮುದುಕ ಇವನಿಗೆ ಸರಿಯಾದ ಬುದ್ಧಿ ಕಲಿಸಬೇಕೆಂದು ನಿಶ್ಚಯಿಸಿದ.

ಅನಂತರ ಹುಡುಗ ಒಂದು ಮರವನ್ನು ಕಡಿಯಲು ಮೊದಲಿಟ್ಟ. ಎರಡನೆಯ ಸಾರಿ ಕೈಯೆತ್ತಲು ಕೊಡಲಿ ಮರಕ್ಕೆ ಬೀಳುವುದರ ಬದಲು ಅವನ ಕಾಲಿಗೆ ಬಿತ್ತು. ಅವನು ಅಳುತ್ತ ಮನೆಗೆ ಓಡಬೇಕಾಯಿತು.

ಆಗ ಭೂತಯ್ಯ "ಅಪ್ಪ, ನಾನು ಹೋಗಿ ಮರ ಕಡಿದು ತರುತ್ತೇನೆ" ಎಂದ.

ಅವನ ತಂದೆ "ನಿನ್ನ ಅಣ್ಣಂದಿರಿಬ್ಬರೂ ಹೋಗಿ ಕಾಲು ಕುಂಟು ಮಾಡಿಕೊಂಡು ಬಂದಿದ್ದಾರೆ. ಮರ ಕಡಿಯುವ ಕೆಲಸ ನಿನಗೇನು ಗೊತ್ತಿದೆ? ಬಾಯಿಮುಚ್ಚಿಕೊಂಡು ಮನೆಯಲ್ಲಿ ಬಿದ್ದಿರು!" ಎಂದು-ಬಿಟ್ಟ.

ಭೂತಯ್ಯ ತಾನು ಹೋಗಲೇಬೇಕೆಂದು ಹಟ ಹಿಡಿದ. ತಂದೆ ಸಿಟ್ಟಿನಿಂದ "ಎಲ್ಲಾದರೂ ಹಾಳಾಗಿ ಹೋಗು. ನಿನ್ನ ಕಾಲೂ ಮುರಿದರೆ ಆಮೇಲೆ ನಿನಗೇ ಬುದ್ಧಿ ಬರುತ್ತದೆ!" ಎಂದು ಗದರಿದ. ತಾಯಿ ಅವನಿಗೆ ಒಂದೇ ಒಂದು ರಾಗಿಯ ರೊಟ್ಟಿಯನ್ನೂ ಒಂದು ಮಣ್ಣಿನ ಕುಡಿಕೆಯ ತುಂಬಾ ನೀರನ್ನೂ ಕೊಟ್ಟಳು.

ಕಾಡಿಗೆ ಕಾಲಿಟ್ಟ ಕೂಡಲೆ ಭೂತಯ್ಯನೂ ಕುಳ್ಳ ಮುದುಕನನ್ನು ಕಂಡ. ಮುದುಕ "ನನಗೆ ಹಸಿವು ಬಾಯಾರಿಕೆ ಬಹಳ

ವಾಗಿದೆ. ಸ್ವಲ್ಪ ರೊಟ್ಟಿಯನ್ನೂ ನೀರನ್ನೂ ಕೊಡು" ಎಂದು ಕೇಳಿದ.

ಭೂತಯ್ಯ "ನನ್ನ ಗಂಟಿನಲ್ಲಿರುವುದು ರಾಗಿಯ ರೊಟ್ಟಿ ಮತ್ತು ನೀರು ಮಾತ್ರ. ನಿನಗೆ ಅವೇ ಬೇಕಾದರೆ, ಬಾ; ಇಬ್ಬರೂ ಕುಳಿತು ಕೊಂಡು ಒಟ್ಟಿಗೆ ತಿನ್ನೋಣ" ಎಂದ.

ಅವರಿಬ್ಬರೂ ಒಂದು ಮರದ ನೆರಳಿನಲ್ಲಿ ಕುಳಿತುಕೊಂಡರು. ಭೂತಯ್ಯ ತನ್ನ ಬುತ್ತಿಯ ಗಂಟನ್ನು ಬಿಚ್ಚಿ ನೋಡಿದರೆ ಅಲ್ಲಿ ಏನಿತ್ತು ಎನ್ನುವಿರಿ? ರಾಗಿಯ ರೊಟ್ಟಿಯೆಲ್ಲಾ ಜೋಳದ ರೊಟ್ಟಿಯಾಗಿತ್ತು. ನೀರೆಲ್ಲಾ ಸೊಗಸಾದ ಮೊಸರಾಗಿಬಿಟ್ಟಿತ್ತು. ಅವರು ಬಹಳ ಸಂತೋಷ ದಿಂದ ರೊಟ್ಟಿಯನ್ನೂ ಮೊಸರನ್ನೂ ತಿಂದರು.

ಊಟ ಮುಗಿದ ಮೇಲೆ ಮುದುಕ "ನೀನು ಬಹಳ ಒಳ್ಳೆಯ ಹುಡುಗ. ನಿನ್ನ ತಿಂಡಿಯನ್ನು ನನಗೂ ಕೊಟ್ಟು ತಿಂದಿರುವೆ. ಆದ್ದ ರಿಂದ ನಾನು ನಿನಗೆ ಒಂದು ಉಪಕಾರ ಮಾಡುತ್ತೇನೆ. ಅದೋ ನೋಡು–ಅಲ್ಲಿ ಒಂದು ಹಳೆಯ ಮರವಿದೆ. ನೀನು ಅದನ್ನು ಕಡಿದು ಹಾಕು. ಅದರ ಬೇರಿನಲ್ಲಿ ನಿನಗೆ ಒಂದು ವಸ್ತು ಸಿಕ್ಕುತ್ತದೆ" ಎಂದು ಹೇಳಿ ಕಣ್ಮರೆಯಾದ.

ಭೂತಯ್ಯ ಮುದುಕ ತೋರಿಸಿದ್ದ ಮರವನ್ನು ಕಡಿದುಹಾಕಿದ. ಅದು ಕೆಳಗೆ ಬಿದ್ದಾಗ ಅದರ ಬುಡದಲ್ಲಿ ಪರಿಶುದ್ಧವಾದ ಅಪರಂಜಿ ಬಂಗಾರದ ಗರಿಗಳಿದ್ದ ಒಂದು ಕೋಳಿಯಿತ್ತು.

ಭೂತಯ್ಯ ಅದನ್ನು ತೆಗೆದುಕೊಂಡು ಕಾಡಿನ ಆಚೆ ಇದ್ದ ಒಂದು ಊರಿಗೆ ಹೋದ. ಅಲ್ಲಿ ಒಂದು ಅಂಗಡಿಯಲ್ಲಿ ಸ್ವಲ್ಪ ತಿಂಡಿ ಕೊಂಡು ತಿಂದ. ಅಷ್ಟುಹೊತ್ತಿಗೆ ಬಹಳ ಕತ್ತಲಾಗಿತ್ತು. ಆದ್ದರಿಂದ ಅವನು ರಾತ್ರಿ ಅಲ್ಲೇ ಮಲಗಿರಲು ಸ್ಥಳ ಕೊಡಬೇಕೆಂದು ಅಂಗಡಿ ಯವನನ್ನು ಕೇಳಿದ.

ಅಂಗಡಿಯವನಿಗೆ ಮೂರು ಮಂದಿ ಹೆಣ್ಣುಮಕ್ಕಳಿದ್ದರು. ಈ ಬಂಗಾರದ ಕೋಳಿಯನ್ನು ಕಂಡಾಗ ಅದನ್ನು ಪರೀಕ್ಷೆಮಾಡಿ ಅದರ ಒಂದು ಗರಿಯನ್ನು ಕಿತ್ತುಕೊಳ್ಳಬೇಕೆಂದು ಅವರಿಗೆ ಆಸೆ ಹುಟ್ಟಿತು.

ಅವರಲ್ಲಿ ಹಿರಿಯುವಳು "ಏನಾದರೂ ಆಗಲಿ! ನಾನು ಒಂದು ಗರಿಯನ್ನು ಕಿತ್ತೀ ಕೀಳುತ್ತೇನೆ!" ಎಂದಳು.

ರಾತ್ರಿ ಭೂತಯ್ಯ ಕೋಳಿಯನ್ನು ಕಾಲುಕಟ್ಟಿ ನಡುಮನೆಯ ಕಿಟಕಿಯಲ್ಲಿಟ್ಟು ತಾನು ಜಗಲಿಯ ಮೇಲೆ ಮಲಗಿದ. ಅವನು ಕಣ್ಣು ಮುಚ್ಚಿದ್ದೇ ತಡ, ಹಿರಿಯ ಹುಡುಗಿ ಕೋಳಿಯ ಬಳಿಗೆ ಹೋಗಿ ಅದರ ಒಂದು ಗರಿಯನ್ನು ಹಿಡಿದು ಎಳೆದಳು. ಪಾಪ! ಅವಳು ಅಲ್ಲಿಗೇ ಅಂಟುಕೊಂಡುಬಿಟ್ಟಳು! ಕೈಯನ್ನಾಗಲೀ ಬೆರಳುಗಳನ್ನಾಗಲಿ ಹಿಂದಕ್ಕೆ ಎಳೆದುಕೊಳ್ಳಲು ಅವಳಿಗೆ ಆಗಲಿಲ್ಲ! ಅವಳ ಆಶ್ಚರ್ಯಕ್ಕೆ ಮಿತಿಯೇ ಇಲ್ಲದಂತಾಯಿತು.

ಅಷ್ಟರಲ್ಲೇ ಎರಡನೆಯುವಳು ತಾನೂ ಒಂದು ಚಿನ್ನದ ಗರಿಯನ್ನು ಸಂಪಾದಿಸಬೇಕೆಂದು ಅಲ್ಲಿಗೆ ಬಂದಳು. ಆದರೆ ಅಕ್ಕನನ್ನು ಮುಟ್ಟಿದ್ದೇ ತಡ, ಅವಳ ಮೈಗೆ ಇವಳು ಅಂಟಿಕೊಂಡಳು!

ಕೊನೆಯಲ್ಲಿ ಮೂರನೆಯ ಹುಡುಗಿ ತನಗೂ ಒಂದು ಗರಿ ಬೇಕೆಂದು ಬಂದಳು. ದೊಡ್ಡವರಿಬ್ಬರೂ "ಬರಬೇಡ! ಬರಬೇಡ! ದೂರ ಇರು!" ಎಂದು ಕೂಗಿಕೊಂಡರು. ಅವರು ಏಕೆ ಹೀಗೆ ಕೂಗುತ್ತಿದ್ದರೆಂದು ಅವಳಿಗೆ ಅರ್ಥವಾಗಲಿಲ್ಲ. "ಅವರು ಹೋಗಿದ್ದಾರೆ, ನಾನೇಕೆ ಬಿಡಬೇಕು?" ಎಂದುಕೊಂಡು ಅವಳೂ ಅವರ ಬಳಿಗೆ ಹೋದಳು. ಆದರೆ ಅವರಿಬ್ಬರನ್ನೂ ಮುಟ್ಟುತ್ತಿದ್ದ ಹಾಗೆಯೇ ಅವರಿಗೆ ಅಂಟಿಕೊಂಡಳು!

ಹೀಗಾಗಿ, ಅವರು ರಾತ್ರಿಯೆಲ್ಲಾ ಕೋಳಿಯ ಹಿಂದುಗಡೆ ಒಬ್ಬರಿಗೊಬ್ಬರು ಅಂಟಿಕೊಂಡು ನಿಂತಿದ್ದರು.

ಮಾರನೆ ದಿನ ಬೆಳಗಾಗುತ್ತಲೆ ಭೂತಯ್ಯ ಕೋಳಿಯನ್ನು ಕಂಕುಳಲ್ಲಿಟ್ಟುಕೊಂಡು ಹೊರಟೇ ಬಿಟ್ಟ! ಅದರ ಹಿಂದೆ ಇದ್ದ ಮೂವರು ಹುಡುಗಿಯರೂ ಕೋಳಿಗೆ ಅಂಟಿಕೊಂಡು ಅವನು ಹೋದ ಕಡೆಯೆಲ್ಲಾ ಅದಷ್ಟು ವೇಗವಾಗಿ ಓಡಬೇಕಾಯಿತು.

ದಾರಿಯ ಪಕ್ಕದ ಒಂದು ಹೊಲದಲ್ಲಿ ಆ ಊರಿನ ಜೋಯಿಸ ತುಂಬೆಹೂವು ಬಿಡಿಸುತ್ತಿದ್ದ. ಇವರನ್ನು ನೋಡಿದಾಗ ಅವನು "ಲೇ

ಹುಡುಗಿಯರೆ, ಆ ಹುಡುಗನ ಹಿಂದೆ ಹಾಗೆ ಸಾಲುಗಟ್ಟಿಕೊಂಡು ಓಡಿಹೋಗುವುದಕ್ಕೆ ನಿಮಗೆ ನಾಚಿಕೆಯಾಗುವುದಿಲ್ಲವೆ? ಮಾನ ಮರ್ಯಾದೆ ಇಲ್ಲದ ಹೆಂಗಸರು ಈಗಿನ ಕಾಲದವರು! ಒಳ್ಳೆಯ ನಡತೆಯೆ ಇದು?" ಎಂದು ಕೂಗುತ್ತ, ಅವರ ಹತ್ತಿರ ಬಂದು ಎಲ್ಲರಿಗಿಂತಲೂ ಹಿಂದಿದ್ದ ಕಿರಿಯ ಹುಡುಗಿಯ ಕೈಯನ್ನು ಹಿಡಿದು ಎಳೆದ. ಅವಳನ್ನು ಮುಟ್ಟಿದ ಕೂಡಲೆ ಅವನೂ ಅವರಿಗೆ ಅಂಟಿಕೊಂಡ! ಅವನೂ ಅವರ ಹಿಂದೆ ಓಡಬೇಕಾಯಿತು!

ಇಷ್ಟುಹೊತ್ತಿಗೆ ಜೋಯಿಸರ ಶಿಷ್ಯನೊಬ್ಬ ಅಲ್ಲಿಗೆ ಬರುತ್ತಿದ್ದ. ಅವನು ತನ್ನ ಗುರುಗಳನ್ನು ಕಂಡು ಬೆರಗಾಗಿ, "ಸ್ವಾಮಿ, ಸ್ವಾಮಿ, ಶಾಸ್ತ್ರಿಗಳೆ ಎಲ್ಲಿಗೆ ಹೋಗುತ್ತಿರುವಿರಿ? ಈ ದಿನ ಅವರ ಮನೆಯಲ್ಲಿ ನಾಮಕರಣ! ಮರೆತುಬಿಟ್ಟಿರ?" ಎಂದು ಕೂಗಿಕೊಂಡ.

ಅನಂತರ ಅವನು ಓಡಿಬಂದು ಜೋಯಿಸನ ಪಂಚೆ ಹಿಡಿದು ಎಳೆಯಲು ಕೈಚಾಚಿದ. ಚಾಚಿದ ಕೈ ಹಿಂದಕ್ಕೆ ಬರಲಿಲ್ಲ! ಅವನೂ ಅವರಿಗೆ ಅಂಟಿಕೊಂಡ!

ಸ್ವಲ್ಪದೂರ ಮುಂದೆ ಇಬ್ಬರು ರೈತರು ನೇಗಿಲು ಹೂಡಿಕೊಂಡು ಹೊಲಗಳಿಗೆ ಹೋಗುತ್ತಿದ್ದರು. ಜೋಯಿಸ "ಅಯ್ಯಾ, ನಮ್ಮನ್ನು ಬಿಡಿಸಿಕೊಳ್ಳಿ, ಬನ್ನಿ" ಎಂದು ಬೇಡಿದ.

ಜೋಯಿಸನ ಗತಿಯನ್ನು ನೋಡಿ ಅವರಿಗೆ "ಅಯ್ಯೋ! ಪಾಪ!" ಎನ್ನಿಸಿತು. ಇಬ್ಬರೂ ಬಹಳ ಮರ್ಯಾದೆಯಿಂದ ಅವರನ್ನು ಬಿಡಿಸಲು ಬಂದರು. ಆದರೆ ಅವನನ್ನು ಮುಟ್ಟಿದ ಕೂಡಲೆ ಅವರೂ ಅಂಟಿಕೊಂಡರು!

ಈ ಏಳುಮಂದಿಯ ಮೆರವಣಿಗೆ ಭೂತಯ್ಯನ ಹಿಂದೆ ಹಿಂದೆಯೇ ಓಡಿತು. ಕಡೆಗೆ ಅವರು ಒಂದು ಪಟ್ಟಣಕ್ಕೆ ಬಂದರು. ಅಲ್ಲಿ ಒಬ್ಬ ರಾಜ ಆಳುತ್ತಿದ್ದ. ಅವನಿಗೆ ಒಬ್ಬಳೇ ಮಗಳಿದ್ದಳು. ಆ ರಾಜಕುಮಾರಿ ಯಾವಾಗಲೂ ಯೋಚನೆಯಲ್ಲಿ ಮುಳುಗಿರುತ್ತಿದ್ದಳು. ಆವಳ ಮುಖ ಸದಾ ಗಂಭೀರವಾಗಿರುತ್ತಿತ್ತು. ಅವಳು ನಕ್ಕಿದ್ದನ್ನೇ ಯಾರೂ ಕಾಣರು. ಅವಳನ್ನು ನಗಿಸಲು ಯಾರಿಂದಲೂ

ಆಗುತ್ತಿರಲಿಲ್ಲ. ರಾಜ ಚಿಂತಿಸಿ, ಚಿಂತಿಸಿ, ಕೊನೆಗೆ ಯಾರು ಅವಳನ್ನು ನಗಿಸುವರೊ ಅವರಿಗೆ ಅವಳನ್ನು ಕೊಟ್ಟು ಮದುವೆಮಾಡುವುದಾಗಿ ಜಗತ್ತಿಗೆಲ್ಲಾ ಸಾರಿದ್ದ.

ಭೂತಯ್ಯನಿಗೆ ಈ ವರ್ತಮಾನ ಬಂತು. ಕೂಡಲೆ ಅವನು ತನ್ನ ಕೋಳಿಯನ್ನೂ ಅದರ ಹಿಂದೆ ಅಂಟಿಕೊಂಡಿದ್ದವರನ್ನೂ ಕರೆದುಕೊಂಡು ಆ ರಾಜಕುಮಾರಿಯ ಎದುರಿಗೆ ಹೋದ. ಒಬ್ಬರ ಕಾಲನ್ನೊಬ್ಬರು ತುಳಿದು ಓಡಾಡುತ್ತಿದ್ದ ಕೋಳಿಗೆ ಅಂಟುಕೊಂಡಿದ್ದ ಈ ಏಳು ಜನರನ್ನೂ ನೋಡಿದಾಗ ನಗುವನ್ನು ತಡೆಯುವುದು ಯಾರಿಗೆ ತಾನೆ ಸಾಧ್ಯ? ಆವಳು ಬಹಳಹೊತ್ತು ಗಟ್ಟಿಯಾಗಿ ಗಹಗಹಿಸಿ ಬಿದ್ದು ಬಿದ್ದು ಹೊಟ್ಟೆ ಹುಣ್ಣಾಗುವವರೆಗೂ ನಕ್ಕಳು!

ಆಗ ಭೂತಯ್ಯ ಅವಳನ್ನು ತನಗೆ ಕೊಟ್ಟು ಮದುವೆಮಾಡಬೇಕೆಂದು ರಾಜನನ್ನು ಕೇಳಿದ. ಮದುವೆ ಬಹಳ ಸಂಭ್ರಮದಿಂದ ನಡೆಯಿತು. ರಾಜ ಸತ್ತನಂತರ ಭೂತಯ್ಯನೇ ಪಟ್ಟಕ್ಕೇರಿ, ಹೆಂಡತಿಯೊಡನೆ ಬಹಳಕಾಲ ಸುಖವಾಗಿ ಬಾಳಿದ.

# ಕಾಗೆಗಳ ಜ್ಯೋತಿಷ್ಯ

ಕೆಲವು ವರುಷಗಳ ಹಿಂದೆ ಒಂದು ದೊಡ್ಡ ಯುದ್ಧ ನಡೆಯಿತು. ಸಾವಿರಾರು ಜನ ಅದರಲ್ಲಿ ಭಾಗವಹಿಸಿ ಹೋರಾಡಿ ಪ್ರಾಣ ಕಳೆದು ಕೊಂಡರು. ಪ್ರಜೆಗಳಿಗೆ ಅನ್ನ ಬಟ್ಟೆ ಸರಿಯಾಗಿ ಸಿಕ್ಕದೆ ಬಹಳ ಕಷ್ಟವಾಯಿತು. ಎಲ್ಲರೂ " ನಿಂತರೆ ಸಾಕಪ್ಪ ಈ ಯುದ್ಧ ! " ಎಂದು ದೇವರಲ್ಲಿ ಮೊರೆಯಿಟ್ಟರು. ಕಡೆಗೆ ದೇವರು ಕೃಪೆ ಮಾಡಿದ. ಯುದ್ಧ ಮುಗಿದು, ಶಾಂತಿ ಬಂತು.

ಯುದ್ಧ ನಿಂತಕೂಡಲೆ ಯುದ್ಧಕ್ಕೆಂದು ನೇಮಿಸಿಕೊಂಡಿದ್ದ ಸೈನಿಕರನ್ನೆಲ್ಲಾ ಕೆಲಸದಿಂದ ಬಿಡುಗಡೆ ಮಾಡಿದರು. ಎಲ್ಲರಿಗೂ ಎರಡೆರಡು ತಿಂಗಳ ಸಂಬಳವನ್ನು ಬಹುಮಾನವಾಗಿ ಕೊಟ್ಟು ಮನೆಗೆ ಕಳುಹಿಸಿದರು. ಹೀಗೆ ಬಿಡುಗಡೆ ಹೊಂದಿದ ಸೈನಿಕರು ತಾವು ಕೂಡಿಟ್ಟಿದ್ದ ಹಣವನ್ನೆಲ್ಲಾ ಗಂಟು ಕಟ್ಟಿಕೊಂಡು ಗುಂಪು ಗುಂಪಾಗಿ ಹೊರಟರು.

ಇಂತಹ ಒಂದು ಗುಂಪಿನಲ್ಲಿ ಮೂರು ಮಂದಿ ಇದ್ದರು. ಅವರಲ್ಲಿ ಕೂರ್ಮಯ್ಯ ಎನ್ನುವವನು ಒಬ್ಬ. ಅವನು ಇತರ ಸೈನಿಕರಂತೆ ಸಿಕ್ಕಿದ ಹಾಗೆ ಕುಡಿದು ತಿಂದು ದುಡಿದ ದುಡ್ಡನ್ನೆಲ್ಲಾ ದುಂದುಖರ್ಚು ಮಾಡಿರಲಿಲ್ಲ. ಸಂಪಾದಿಸಿದ ಹಣದಲ್ಲಿ ಬಹುಭಾಗವನ್ನು ಜೋಪಾನವಾಗಿ ಕಾಪಾಡಿ ಉಳಿಸಿಕೊಂಡಿದ್ದ. ಅನೇಕ ಸಾರಿ ಅವನ ಸಂಗಾತಿಗಳು ಅವನನ್ನು ಜಿಪುಣನೆಂದು ಹಾಸ್ಯಮಾಡಿ, ಅವನಲ್ಲಿದ್ದುದನ್ನು ಕಿತ್ತುಕೊಳ್ಳಲು ಪ್ರಯತ್ನಪಟ್ಟಿದ್ದರು. ಆದರೆ, ಯಾರು ಎಷ್ಟು ನಕ್ಕರೂ ಅವನು ಮಾತ್ರ ತನ್ನ ಮಿತವ್ಯಯದ ಪದ್ಧತಿಯನ್ನು ಬಿಟ್ಟಿರಲಿಲ್ಲ. ಆದ್ದರಿಂದ ಅವನ ಚೀಲದಲ್ಲಿ ನೂರಾರು ರೂಪಾಯಿಗಳಿದ್ದವು.

ಅವನ ಜೊತೆಯಲ್ಲಿ ಬರುತ್ತಿದ್ದ ಇನ್ನಿಬ್ಬರು ಸೈನಿಕರು ಹೇಗಾದರೂ ಆ ದುಡ್ಡನ್ನು ಅಪಹರಿಸಬೇಕೆಂದು ಹೊಂಚುಹಾಕುತ್ತಿದ್ದರು.

ಯಾವ ಉಪಾಯ ಹೂಡಬೇಕೆಂದು ಇಬ್ಬರೂ ತಮ್ಮತಮ್ಮಲ್ಲೇ ಮಾತಾಡಿಕೊಂಡು, ಒಬ್ಬರಿಗೊಬ್ಬರು ಕಣ್ಣುಹಾರಿಸಿ ಸನ್ನೆ ಮಾಡು ತ್ತಿದ್ದರು.

ಕಡೆಗೆ ಅವರು ನಡೆಯುತ್ತಿದ್ದ ದಾರಿ ಕವಲೊಡೆಯಿತು. ಅವ ರಿಬ್ಬರೂ ಅಲ್ಲಿ ಬಲಗಡೆಗೆ ತಿರುಗಬೇಕೆಂದು ಹೇಳಿದರು.

ಕೂರ್ಮಯ್ಯ "ಕೂಡದು. ಆ ದಾರಿಯನ್ನು ಹಿಡಿದರೆ ನಾವು ಬಿಟ್ಟು ಬಂದ ಸ್ಥಳವನ್ನೇ ಮತ್ತೆ ಸೇರುತ್ತೇವೆ! ನಮ್ಮ ಊರಿಗೆ ಹೋಗುವ ದಾರಿ ಎಡದ ಕಡೆಗಿರುವುದು" ಎಂದ.

ಜಗಳಕ್ಕೆ ಯಾವುದಾದರೂ ನೆಪ ಸಿಕ್ಕಿದರೆ ಸಾಕೆಂದು ಕಾದಿದ್ದ ವರು ಅವರು. ಆದ್ದರಿಂದ ಅವನೊಡನೆ ದೊಡ್ಡ ವಾಗ್ವಾದವನ್ನೇ ಆರಂಭಿಸಿದರು. ಕೊನೆಗೆ ಇಬ್ಬರೂ ನಿಷ್ಕರುಣೆಯಿಂದ ಅವನ ಮೇಲೆ ಬಿದ್ದು, ಏಟು ಕೊಟ್ಟು, ಅವನ ಕಣ್ಣುಗಳೆರಡನ್ನೂ ತಮ್ಮ ಉಗುರು ಗಳಿಂದ ಚುಚ್ಚಿ ಕುರುಡು ಮಾಡಿ, ಅವನನ್ನು ಒಂದು ಮರಕ್ಕೆ ಕಟ್ಟಿ ಹಾಕಿ ಓಡಿ ಹೋದರು.

ರಾತ್ರಿ ಕತ್ತಲಾದಾಗ, ಗಾಳಿಯಲ್ಲಿ ಏನೋ ಪಟಪಟ ಎಂದು ಸದ್ದಾಯಿತು. ಆ ಸದ್ದು ಮೂರು ಕಾಗೆಗಳ ರೆಕ್ಕೆಗಳ ಬಡಿತದಿಂದ ಉಂಟಾದುದು. ಕಾಗೆಗಳು ಸ್ವಲ್ಪ ಹೊತ್ತು ಸುಮ್ಮನೆ ಮರದ ಸುತ್ತಲೂ ಹಾರಾಡಿ, ಅನಂತರ ಮರದ ಮೇಲೆ ಕುಳಿತುಕೊಂಡವು. ಅವು ಒಂದರೊಡನೊಂದು ಆಡಿಕೊಳ್ಳುತ್ತಿದ್ದ ಮಾತೆಲ್ಲಾ ಕೂರ್ಮಯ್ಯನಿಗೆ ಚೆನ್ನಾಗಿ ಕೇಳಿಸುತ್ತಿತ್ತು.

ಒಂದು ಕಾಗೆ "ಅಕ್ಕ, ಈವತ್ತು ಏನು ವಿಶೇಷ?" ಎಂದಿತು.

ಇನ್ನೊಂದು ಕಾಗೆ "ಓ! ನಮಗೆ ಗೊತ್ತಿರುವಷ್ಟು ಸಂಗತಿಗಳು ಈ ಮನುಷ್ಯರಿಗೇನು ಗೊತ್ತು? ಬರಿಯ ಒಣ ಜಂಭ ಇವರದು! ಉದಾಹರಣೆಗೆ, ಮುಂದಿನ ಊರಿನ ರಾಜಕುಮಾರಿಗೆ ಬಹಳ ಕಾಯಿಲೆಯಾಗಿದೆ. ಯಾರು ಅವಳಿಗೆ ವಾಸಿಯಾಗುವ ಹಾಗೆ ಮಾಡುವರೋ ಅವರಿಗೆ ಅವಳನ್ನು ಧಾರೆಯೆರೆದು ಕೊಡುವುದಾಗಿ ರಾಜ ಪ್ರಕಟಿಸಿದ್ದಾನೆ. ಪಾಪ, ಯಾರು ಯಾರೋ ಬಂದು ಎಷ್ಟೆಷ್ಟೋ

ಪ್ರಯತ್ನಿಸುತ್ತಿದ್ದಾರೆ. ಆದರೆ ನಾನು ಬಲ್ಲೆ—ಅವರ ಔಷಧಗಳಿಂದ ಒಂದು ಸಾಸುವೆಯ ಕಾಳಿನಷ್ಟೂ ಉಪಯೋಗವಿಲ್ಲ. ಅದೋ ನೋಡು, ಅಲ್ಲಿ ಹುಲ್ಲಿನ ನಡುವೆ ಅರಳಿ ನಗುತ್ತಿವೆಯಲ್ಲಾ ನೀಲಿಯ ಹೂಗಳು – ಅವನ್ನು ತೆಗೆದುಕೊಂಡುಹೋಗಿ, ದಳಗಳನ್ನು ಸುಟ್ಟು ಬೂದಿಮಾಡಿ, ಆ ಬೂದಿಯನ್ನು ಬಿಸಿ ನೀರಿನಲ್ಲಿ ಕದಡಿ ಕುಡಿಸಿದರೆ ಕ್ಷಣಮಾತ್ರದಲ್ಲಿ ಅವಳ ಕಾಯಿಲೆಯೆಲ್ಲಾ ಮಾಯವಾಗಿ ಎದ್ದು ಓಡಾಡುತ್ತಾಳೆ! ಆದರೆ ಈ ಗುಟ್ಟು ಗೊತ್ತಿರಬೇಕಲ್ಲಾ ಮನುಷ್ಯರಲ್ಲಿ ಯಾರಿಗಾದರೂ! ಬರಿಯ ಜಂಭ ಇವರದು! ಬರಿಯ ಜಂಭ!" ಎಂದಿತು.

ಮೂರನೆಯ ಕಾಗೆ "ಹೌದು! ಈ ಮನುಷ್ಯರದೆಲ್ಲಾ ಬರಿಯ ಕೆಲಸಕ್ಕೆ ಬಾರದ ಗರ್ವವೇ ಹೊರತು ಇನ್ನೇನೂ ಇಲ್ಲ! ನಮಗೆ ಗೊತ್ತಿರುವಷ್ಟು ಸಂಗತಿಗಳು ಇವರಿಗೇನು ಗೊತ್ತು? ಉದಾಹರಣೆಗೆ, ಈವತ್ತು ರಾತ್ರಿ ಹನ್ನೆರಡು ಗಂಟೆಗೆ ಆಕಾಶದಿಂದ ಅಮೃತದಂತಹ ಮಂಜು ಸುರಿಯುತ್ತದೆ. ಅದನ್ನು ಕಣ್ಣಿಗೆ ಹಚ್ಚಿಕೊಂಡರೆ ಸಾಕು, ಎಂತಹ ಕುರುಡನಿಗೂ ದೃಷ್ಟಿ ಸರಿಹೋಗುತ್ತದೆ!" ಎಂದಿತು.

ಮೊದಲನೆಯ ಕಾಗೆ ಇವೆರಡೂ ಇಷ್ಟು ಮಾತಾಡಿದಮೇಲೆ ತಾನೇಕೆ ಸುಮ್ಮನಿರಬೇಕೆಂದು, "ನಿಜ! ನಿಜ! ಈ ಮನುಷ್ಯರಂತಹ ತಿಳಿಗೇಡಿಗಳು ಬೇರೆ ಯಾರೂ ಇಲ್ಲ. ನೀವು ಹೇಳಿದ ನೀಲಿಯ ಹೂವಿನಿಂದ ಒಬ್ಬಳಿಗೆ ಮಾತ್ರ ಪ್ರಯೋಜನವುಂಟು. ಮಂಜಿನ ಅಂಜನದಿಂದ ಎಲ್ಲೋ ಕೆಲವರಿಗೆ ಅನುಕೂಲವಾಗಬಹುದು. ಆದರೆ ಎಲ್ಲರಿಗೂ ಅಗತ್ಯವಾಗಿರುವ ಒಂದು ವಸ್ತು ತಕ್ಷಣ ದೊರೆಯುವ ಬಗೆ ನನಗೆ ಗೊತ್ತು. ಆ ಊರಿನ ಬಾವಿಗಳಲ್ಲಿ ನೀರು ಬತ್ತಿಹೋಗಿ ಜನಕ್ಕೆಲ್ಲಾ ಗಂಟಲೊಣಗಿ ಸಾಯುವ ಗತಿ ಬಂದಿದೆ. ಏನು ಮಾಡಬೇಕೆಂದು ಯಾರಿಗೂ ದಿಕ್ಕೇ ತೋಚದಂತಾಗಿದೆ. ಪಾಪ! ಊರಿನ ಮಧ್ಯೆ ಇರುವ ಚೌಕದ ಬಾವಿಯ ತಳದಲ್ಲಿ ಒಂದು ಅಗಲವಾದ ಚಪ್ಪಟೆಯಾದ ಕಲ್ಲಿದೆ. ಅದನ್ನು ಕಿತ್ತು ಅದರ ಕೆಳಗೆ ಸ್ವಲ್ಪ ಆಳದವರೆಗೂ ಅಗೆದರೆ, ನೀರು ಬುಗ್ಗಬುಗ್ಗೆಯಾಗಿ ಉಕ್ಕಿ ಬರುತ್ತದೆ.

ಇದು ಯಾರೊಬ್ಬರಿಗೂ ಗೊತ್ತಿಲ್ಲ! ಎಲ್ಲರೂ ಯೋಚಿಸಿ ಯೋಚಿಸಿ ಕಣ್ಣುಕಣ್ಣು ಬಿಡುವುದರಲ್ಲೇ ಕಾಲಕಳೆಯುತ್ತಿದ್ದಾರೆ! ಇನ್ನೆರಡು ದಿನ ಹೀಗೆಯೇ ನೀರಿಲ್ಲದೆ ಇದ್ದರೆ ಜೀವವನ್ನೇ ಕಳೆದುಕೊಳ್ಳುವುದು ಖಂಡಿತ!" ಎಂದಿತು.

ಕಾಗೆಗಳು ಮಾತಾಡುತ್ತಿದ್ದಾಗ ಕೂರ್ಮಯ್ಯ ಕಮಕ್ ಕಿಮಕ್ ಎನ್ನದೆ, ಸ್ವಲ್ಪವೂ ಅಲ್ಲಾಡದೆ, ಶಬ್ದಮಾಡದೆ, ಸುಮ್ಮನಿದ್ದ. ಅವು ಮಾತೆಲ್ಲಾ ಮುಗಿದ ಮೇಲೆ ಮತ್ತೆ ಮರದ ಸುತ್ತಲೂ ಹಾರಾಡಿ ಎಲ್ಲಿಗೋ ಹೋಗಿಬಿಟ್ಟವು.

ಅವು ಹಾರಿ ಹೋದ ಸದ್ದು ಕೇಳಿಸಿದ ಕೂಡಲೆ ಆವನು ತನ್ನ ಬಲವನ್ನೆಲ್ಲಾ ಉಪಯೋಗಿಸಿ, ತನ್ನನ್ನು ಬಿಗಿದಿದ್ದ ಹಗ್ಗವನ್ನು ಜಗ್ಗಿ ಜಗ್ಗಿ ಹರಿದು ಹಾಕಿ, ಬಂಧನದಿಂದ ಬಿಡುಗಡೆ ಹೊಂದಿದ. ಅವನು ನಿಂತಿದ್ದ ಸ್ಥಳಕ್ಕೆ ನಾಲ್ಕೈದು ಹೆಜ್ಜೆ ದೂರದಲ್ಲೇ ಮೃದುವಾದ ಹಸುರು ಹುಲ್ಲು ಬೆಳೆದಿತ್ತು. ಅವನು ಮುಂದಕ್ಕೆ ಹಾರಿ ಎರಡು ಕೈಗಳಿಂದಲೂ ಒಂದಿಷ್ಟು ಗರಿಕೆಯನ್ನು ಹಿಡಿದು ಕಿತ್ತ. ಗರಿಕೆಯ ಮೇಲಿದ್ದ ಮಂಜಿನ ನೀರು ಅವನ ಅಂಗೈಗಳಿಗೆ ಅಂಟಿಕೊಂಡಿತು. ಅದರಿಂದ ಆವನು ತನ್ನ ಎರಡು ಕಣ್ಣುಗಳನ್ನೂ ಒರಸಿಕೊಂಡ. ಆಶ್ಚರ್ಯ! ಕಾಗೆ ಹೇಳಿದ್ದ ಮಾತು ನಿಜವಾಯಿತು! ಅವನಿಗೆ ದೃಷ್ಟಿ ಮರಳಿ ಬಂತು! ಸುತ್ತಲೂ ಇದ್ದ ಪದಾರ್ಥಗಳೆಲ್ಲಾ ಬೆಳುದಿಂಗಳಿನಲ್ಲಿ ಅವನಿಗೆ ಸ್ವಚ್ಛವಾಗಿ ಕಾಣಿಸಲಾರಂಭಿಸಿದವು!

ಅವನು ಮನಸ್ಸಿನಲ್ಲೇ ದೇವರನ್ನು ವಂದಿಸಿ, ತನ್ನ ಚೀಲದೊಳಗೆ ಕೈಹಾಕಿ ತಡಕಾಡಿದ. ಒಂದು ಗಾಜಿನ ಸೀಸೆ ಸಿಕ್ಕಿತು. ಹಿಡಿಸಿದಷ್ಟು ಮಂಜಿನ ನೀರನ್ನು ಅದರಲ್ಲಿ ತುಂಬಿಕೊಂಡ. ಅನಂತರ ಅವನು ನೆಲಕ್ಕೆ ಬಗ್ಗಿ ಸುತ್ತಲೂ ಎಚ್ಚರಿಕೆಯಿಂದ ಹುಡುಕಿದ. ಒಂದು ಕಡೆ ಹುಲ್ಲಿನ ನಡುವೆ ನೀಲಿಯ ಹೂಗಳ ಒಂದು ತಂಡವೇ ಅರಳಿತ್ತು. ಅವನು ಹತ್ತಿಪ್ಪತ್ತು ಹೂಗಳನ್ನು ಕಿತ್ತು, ಅಲ್ಲೇ ಅವನ್ನು ಸುಟ್ಟು ಬೂದಿ ಮಾಡಿದ. ತರುವಾಯ ಆ ಬೂದಿಯನ್ನೂ ಮಂಜಿನ ಜಲದ

ಸೀಸೆಯನ್ನೂ ಜೋಪಾನವಾಗಿ ತನ್ನ ಚೀಲದಲ್ಲಿಟ್ಟುಕೊಂಡು ರಾಜನೂ ರಾಜಕುಮಾರಿಯೂ ಇದ್ದ ಊರಿಗೆ ಹೊರಟ.

ಅರಮನೆಯನ್ನು ತಲಪಿದೊಡನೆಯೆ ಅವನು ರಾಜನನ್ನು ಕಂಡು, ತಾನು ರಾಜಕುಮಾರಿಯ ರೋಗವನ್ನು ವಾಸಿಮಾಡಲು ಬಂದಿರುವುದಾಗಿ ತಿಳಿಸಿದ. ಔಷಧ ಕೊಡಬಹುದೆಂದು ರಾಜನ ಒಪ್ಪಿಗೆ ದೊರೆಯಿತು. ಕೂರ್ಮಯ್ಯ ತಾನು ತಂದಿದ್ದ ಹೂವಿನ ದಳಗಳ ಬೂದಿಯನ್ನು ಬಿಸಿನೀರಿನಲ್ಲಿ ಕದಡಿ ಅವಳಿಗೆ ಕುಡಿಸಿದ. ಕೂಡಲೆ ಅವಳ ಬಾಧೆಯೆಲ್ಲಾ ಮಾಯವಾಗಿ, ಅವಳಿಗೆ ಸಂಪೂರ್ಣ ಆರೋಗ್ಯ ಬಂತು.

ಆಗ ಕೂರ್ಮಯ್ಯ ರಾಜನ ಪ್ರಕಟಣೆಯ ಪ್ರಕಾರ ರಾಜಕುಮಾರಿಯನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಕೇಳಿದ. ಆದರೆ ಮಾಸಿದ ಹಳೆಯ ಬಟ್ಟೆಗಳನ್ನುಟ್ಟು ಹಳ್ಳಿಯ ಬಡವನಂತೆ ಕಾಣುತ್ತಿದ್ದ ಅವನಿಗೆ ಹೆಂಡತಿಯಾಗಲು ರಾಜಕುಮಾರಿಗೆ ಕೊಂಚವೂ ಇಷ್ಟವಿರಲಿಲ್ಲ. ರಾಜನಿಗಂತೂ ಮಗಳನ್ನು ಇಂತಹ ಅಳಿಯನ ವಶಮಾಡುವುದಕ್ಕೆ ಮೊದಲೇ ಮನಸ್ಸಿರಲಿಲ್ಲ. ಆದ್ದರಿಂದ ಅವನು ಏನಾದರೂ ಉಪಾಯದಿಂದ ಕೂರ್ಮಯ್ಯನನ್ನು ಕಳುಹಿಸಿಬಿಡಬೇಕೆಂದು ಯೋಚಿಸಿ, "ಯಾರು ರಾಜಕುಮಾರಿಯನ್ನು ಮದುವೆಯಾಗಲು ಅಪೇಕ್ಷೆಪಡುವರೋ ಅವರು ನಮ್ಮ ಊರಿನ ಜನಗಳಿಗೆಲ್ಲಾ ಸಾಕಾಗುವಷ್ಟು ಕುಡಿಯುವ ನೀರನ್ನು ಒದಗಿಸಬೇಕು. ನಮ್ಮ ಬಾವಿಗಳಲ್ಲಿ ಈ ಸಾರಿ ಬೇಸಗೆಯಲ್ಲಿ ಬತ್ತಿಹೋದ ನೀರು ಮತ್ತೆ ಬಂದೇ ಇಲ್ಲ!" ಎಂದ.

ಕೂರ್ಮಯ್ಯ ಊರಿನ ಮಧ್ಯದ ಚೌಕಕ್ಕೆ ಹೋಗಿ, ಅಲ್ಲಿನ ಬಾವಿಯ ತಳದಲ್ಲಿ ಹುದುಗಿದ್ದ ಚಪ್ಪಟೆಯಾದ ಕಲ್ಲನ್ನು ಈಚೆಗೆ ತೆಗೆದು, ಅದರ ಕೆಳಗೆ ಅಗೆಯಬೇಕೆಂದು ಜನಗಳಿಗೆ ಬೋಧಿಸಿದ. ಯಾರು ಯಾವ ಸಲಹೆ ಕೊಟ್ಟರೂ ಅದರಂತೆ ನಡೆಯಲು ಸಿದ್ಧರಾಗಿದ್ದ ಅವರು ಬದಲು ಹೇಳದೆ ಹಾಗೆಯೇ ಮಾಡಿದರು. ಊರಿಗೆಲ್ಲಾ ವರುಷಗಟ್ಟಲೆ ಆಗುವಷ್ಟು ನೀರು ಸಮೃದ್ಧಿಯಾಗಿ ಉಕ್ಕಿ ಬಂತು.

ಈಗ ರಾಜ ಮತ್ತೆ ಆಡಿದ ಮಾತಿಗೆ ತಪ್ಪುವಂತಿರಲಿಲ್ಲ. ರಾಜ ಕುಮಾರಿಗೂ ಅವನ ಬುದ್ಧಿವಂತಿಕೆಯನ್ನು ಕಂಡು, ಅವನಲ್ಲಿ ಹೊಸ ದಾಗಿ ಗೌರವ ಹುಟ್ಟಿತ್ತು. ಆದಕಾರಣ ತಂದೆಯಾಗಲಿ ಮಗಳಾಗಲಿ ಈ ಸಾರಿ ಯಾವ ಆಕ್ಷೇಪಣೆಯನ್ನೂ ಎತ್ತಲಿಲ್ಲ. ಕೂರ್ಮಯ್ಯ ರಾಜಕುಮಾರಿಯನ್ನು ಮದುವೆಯಾಗಿ, ರಾಜನ ಅಳಿಯನಾಗಿ ಸುಖವಾಗಿರತೊಡಗಿದ.

ಒಂದು ದಿನ ಆವನು ಗಾಳಿಯ ಸೇವನೆಗೆಂದು ಊರಿಗೆ ಸ್ವಲ್ಪ ದೂರದಲ್ಲಿ ನಡೆದು ಹೋಗುತ್ತಿದ್ದ. ಆಗ ಹಿಂದೆ ಅವನ ಕಣ್ಣು ಕುಕ್ಕಿ ಹಣವನ್ನೆಲ್ಲಾ ದೋಚಿಕೊಂಡು ಪರಾರಿಯಾಗಿದ್ದ ಸೈನಿಕ ರಿಬ್ಬರೂ ಎದುರಿಗೆ ಬಂದರು. ಆದರೆ, ಹೆಗಲಿಗೆ ಚೀಲ ತಗಲು ಹಾಕಿಕೊಂಡು, ಕಳೆಯಿಲ್ಲದ ಮುಖದೊಡನೆ ಕಾಲೆಳೆದುಕೊಂಡು ಓಡಾಡುತ್ತಿದ್ದ ಅಂದಿನ ಕೂರ್ಮಯ್ಯನೆಲ್ಲಿ? ರಾಜನ ಅಳಿಯನಿಗೆ ತಕ್ಕ ಬಟ್ಟೆಬರೆಗಳನ್ನೂ ಒಡವೆಗಳನ್ನೂ ಧರಿಸಿ ಕಂಗೊಳಿಸುತ್ತಿದ್ದ ಈಗಿನ ಕೂರ್ಮಯ್ಯನೆಲ್ಲಿ? ಅವರಿಗೆ ಅವನ ಗುರುತೇ ಸಿಕ್ಕಲಿಲ್ಲ. ಯಾರೋ ಏನೋ ಎಂದು ದೂರದಿಂದಲೇ ಅವನನ್ನು ನೋಡಿ ಗುಸ ಗುಸ ಪಿಸಪಿಸ ಎಂದು ಒಬ್ಬರ ಕಿವಿಯಲ್ಲೊಬ್ಬರು ಮಾತಾಡಿ ಕೊಳ್ಳುತ್ತ, ಅವರು ದಾರಿಯ ಒಂದು ಮಗ್ಗುಲಿಗೆ ಸರಿದರು. ಅವರ ವರ್ತನೆಯನ್ನು ಕಂಡು ಕೂರ್ಮಯ್ಯನಿಗೆ ನಗುಬಂತು. ಅವನು ತಾನೇ ಅವರನ್ನು ಮೊದಲು ಮಾತಾಡಿಸಿ, "ಇಲ್ಲಿ ನೋಡಿ, ನಾನು ನಿಮ್ಮ ಹಳೆಯ ಸ್ನೇಹಿತ, ಕೂರ್ಮಯ್ಯ. ನೀವಿಬ್ಬರೂ ಒಂದಾಗಿ, ಯಾವುದೋ ಕುಂಟು ನೆಪದಿಂದ ನಿಮ್ಮ ಜೊತೆಗಾರನೊಡನೆ ಜಗಳ ತೆಗೆದು, ಮೈಯೆಲ್ಲಾ ಜಜ್ಜಿಹೋಗುವ ಹಾಗೆ ಅವನನ್ನು ಹೊಡೆದು, ಬಡಿದು, ಕಣ್ಣು ಕುಕ್ಕಿ ಕುರುಡು ಮಾಡಿ, ಅವನ ಹತ್ತಿರವಿದ್ದ ಹಣ ವನ್ನೆಲ್ಲಾ ಸುಲಿಗೆ ಮಾಡಿಕೊಂಡು ಓಡಿಹೋದಿರಲ್ಲಾ—ಅವನೇ ನಾನು! ದೇವರ ದಯದಿಂದ ನಿಮ್ಮ ದುರುದ್ದೇಶ ಫಲಿಸಲಿಲ್ಲ. ನೀವು ಕೆಡುಕೆಣಿಸಿದರೂ ಕಡೆಗೆ ಅದರಿಂದ ನನಗೆ ಒಳ್ಳೆಯದೇ ಆಯಿತು!" ಎಂದ.

ಇದನ್ನು ಕೇಳಿದ ಕೂಡಲೆ ಅವರಿಬ್ಬರೂ ಅವನ ಪಾದಕ್ಕೆ ಬಿದ್ದು ಕ್ಷಮಾಪಣೆ ಬೇಡಿಕೊಂಡರು. ಅವನು ಕರುಣೆ ತೋರಿಸಿ ಅವರನ್ನು ಮನ್ನಿಸಿದ. ಅಷ್ಟೇ ಅಲ್ಲದೆ, ಇಬ್ಬರನ್ನೂ ಅರಮನೆಗೆ ಕರೆದುಕೊಂಡು ಹೋಗಿ, ಬೇಕುಬೇಕಾದ ಹಾಗೆ ಅನ್ನಬಟ್ಟೆಗಳನ್ನು ಕೊಟ್ಟು ಮರ್ಯಾದೆ ಮಾಡಿದ. ಹಾಗೆಯೇ, ತನಗೆ ಕಾಗೆಗಳಿಂದ ದೊರೆತ ಸಹಾಯದ ಕತೆಯನ್ನೆಲ್ಲಾ ಅವರಿಗೆ ವಿವರಿಸಿ ಹೇಳಿದ.

ಅವನ ಅದೃಷ್ಟವನ್ನು ತಿಳಿದುಕೊಂಡನಂತರ ಅವರಿಬ್ಬರಿಗೂ ಅಸೂಯೆ ಕೆರಳಿತು. "ನಾವು ಇವನನ್ನು ಆ ಮರಕ್ಕೆ ಕಟ್ಟಿಹಾಕಿದ್ದರಿಂದ ಅಲ್ಲವೆ ಇವನು ಇಷ್ಟು ಶ್ರೀಮಂತನಾದುದು? ಇಲ್ಲದಿದ್ದರೆ ಎಲ್ಲಿರುತ್ತಿದ್ದನೋ ತಿರುಕ! ನಾವು ಕಟ್ಟಿಹಾಕಿದ ಇವನಿಗೇ ಇಷ್ಟು ಐಶ್ವರ್ಯ ಬಂದಿದೆ, ನಮಗೆ ಬರುವುದಿಲ್ಲವೆ? ನಾಳೆ ರಾತ್ರಿ ನಾವೂ ಹೋಗಿ ಅದೇ ಮರದ ಕೆಳಗೆ ನಿಂತುಕೊಳ್ಳೋಣ!" ಎಂದು ಅವರು ನಿಶ್ಚಯಿಸಿದರು.

ಮಾರನೆಯ ದಿನ ರಾತ್ರಿ ಅವರಿಬ್ಬರೂ ಯಾರಿಗೂ ಗೊತ್ತಾಗದಂತೆ ಕದ್ದುಹೋಗಿ, ಹಿಂದೆ ತಾವು ಕೂರ್ಮಯ್ಯನನ್ನು ಕಟ್ಟಿಹಾಕಿದ್ದ ಮರದ ಕೆಳಗೆ ಕುಳಿತುಕೊಂಡರು. ಕೆಲವು ನಿಮಿಷಗಳಲ್ಲೇ ಗಾಳಿಯಲ್ಲಿ ಪಟಪಟ ಎಂಬ ಶಬ್ದ ಕೇಳಿಬಂತು. ಅನಂತರ ಮೂರು ಕಾಗೆಗಳು ಬಂದು ಮರದ ಮೇಲೆ ಕುಳಿತುಕೊಂಡವು.

ಒಂದು ಕಾಗೆ "ಅಕ್ಕ, ಯಾರೋ ನಾವು ಆಡಿಕೊಳ್ಳುವ ಮಾತನ್ನೆಲ್ಲಾ ಹೊಂಚಿ ಕೇಳಿರಬೇಕು. ಎಲ್ಲಿ ನೋಡಿದರೂ ದೇಶದ ಜನಗಳೆಲ್ಲಾ ಈಚೆಗೆ ನಡೆದಿರುವ ಅದ್ಭುತಗಳ ವಿಚಾರವನ್ನೇ ಒಬ್ಬರಿಗೊಬ್ಬರು ಹೇಳಿಕೊಂಡು ಚರ್ಚೆ ಮಾಡುತ್ತಿರುತ್ತಾರೆ. ರಾಜಕುಮಾರಿಗೆ ಕಾಯಿಲೆ ವಾಸಿಯಾಗಿದೆಯಂತೆ! ಎರಡು ಕಣ್ಣುಗಳೂ ಕುರುಡಾಗಿದ್ದ ಒಬ್ಬನಿಗೆ ಮತ್ತೆ ಪೂರ್ತಿಯಾಗಿ ದೃಷ್ಟಿ ಬಂದಿದೆಯಂತೆ! ಊರಿಗೆಲ್ಲಾ ಸಾಕಾಗುವಷ್ಟು ನೀರು ದೊರೆತಿದೆಯಂತೆ! ಒಂದು ಸಾರಿ ನೋಡಿಬಿಡೋಣ–ಈವತ್ತೂ ಯಾರಾದರೂ ಬಂದು ಇಲ್ಲೆಲ್ಲಾದರೂ ಮುಚ್ಚಿಟ್ಟುಕೊಂಡಿರಬಹುದು!" ಎಂದಿತು.

ಕಾಗೆಗಳೆಲ್ಲಾ ಮರದಿಂದ ಇಳಿದು ಸುತ್ತಲೂ ಹಾರಾಡಿ ನೋಡಿದವು. ಮರದ ಕೆಳಗೇ ಕುಳಿತಿದ್ದವರು ಅವುಗಳ ಕಣ್ಣಿಗೆ ಬೀಳದೆ ಹೋಗುತ್ತಾರೆಯೆ? ಅವರನ್ನು ಕಂಡದ್ದೇ ತಡ, ಅವು ಮೂರೂ ಕೋಪದಿಂದ "ಕಾ! ಕಾ! ಕಾ! ಕಾ!" ಎಂದು ಕಿರಿಚುತ್ತ, ಅವರ ಮೇಲೆ ನುಗ್ಗಿ, ನೆಲಕ್ಕೆ ಕೆಡವಿ, ಅವರ ಕಣ್ಣುಗಳನ್ನು ಕುಕ್ಕಿ ಕುಕ್ಕಿ, ಮೈಯಲ್ಲಿದ್ದ ರಕ್ತವೆಲ್ಲಾ ಹೊರಕ್ಕೆ ಹರಿದು ಬರುವಂತೆ ಮಾಡಿದವು. ಅವರಿಬ್ಬರೂ ಅಲ್ಲೇ ಸತ್ತುಬಿದ್ದರು.

ಆ ರಾತ್ರಿಯೆಲ್ಲಾ ಹಾಗೆಯೇ ಕಳೆಯಿತು. ಬೆಳಗಾದ ಮೇಲೆ ಎಷ್ಟು ಹೊತ್ತಾದರೂ ತನ್ನ ಸ್ನೇಹಿತರ ಸುದ್ದಿಯೇ ಇಲ್ಲದ್ದರಿಂದ, ಕೂರ್ಮಯ್ಯ ಕುದುರೆಯೇರಿ, ಅವರು ಏನಾದರೋ ಎಂದು ಹುಡುಕಿಕೊಂಡು ಹೊರಟ. ತನಗೆ ಅಷ್ಟೊಂದು ಉಪಕಾರ ಮಾಡಿದ್ದ ಮರದ ಕೆಳಗಡೆಯೇ ಅವರು ಪ್ರಾಣ ಬಿಟ್ಟಿದ್ದುದನ್ನು ಕಂಡಾಗ ಅವನಿಗೆ ವ್ಯಸನವಾಯಿತು. ಅವರು ತನಗೆ ಕೊಟ್ಟಿದ್ದ ಕಷ್ಟಗಳನ್ನೆಲ್ಲಾ ಮರೆತು, ಅವನು "ಅಯ್ಯೋ! ಪಾಪ! ಕೊನೆಗೆ ಈ ಗತಿ ಬಂತೆ ಇವರಿಗೆ!" ಎಂದು ಮರುಗಿದ.

# ಪೊರಕೆ ಮೀಸೆಯ ರಾಜ

ಒಂದು ದೇಶದಲ್ಲಿ ಒಬ್ಬ ರಾಜನಿದ್ದ. ಅವನಿಗೊಬ್ಬ ಮಗಳಿದ್ದಳು. ಅವಳು ಬಹಳ ಚೆಲುವೆ. ಆದರೆ ಅವಳಿಗೆ ಚೆಲುವು ಎಷ್ಟಿತ್ತೋ ಗರ್ವವೂ ಅಷ್ಟೇ ಇತ್ತು. ತನ್ನನ್ನು ಮದುವೆಯಾಗಬೇಕೆಂದು ಯಾರು ಬಂದರೂ ಅವಳು ಒಪ್ಪುತ್ತಿರಲಿಲ್ಲ. ಬಂದವರನ್ನೆಲ್ಲಾ ಹಾಸ್ಯಮಾಡಿ, ನಕ್ಕು, ಹೀಯಾಳಿಸಿ ಕಳುಹಿಸಿಬಿಡುತ್ತಿದ್ದಳು.

ಒಂದು ಸಾರಿ ರಾಜ ಸುತ್ತಮುತ್ತಣ ರಾಜ್ಯಗಳಿಂದ ತನ್ನ ಸ್ನೇಹಿತರನ್ನೆಲ್ಲಾ ಕರೆಸಿ ಔತಣ ಏರ್ಪಡಿಸಿದ. ಅವರೆಲ್ಲಾ ಸಾಲಿಗೆ ತಮ್ಮ ತಮ್ಮ ಐಶ್ವರ್ಯವನ್ನೂ ಸ್ಥಾನಮಾನಗಳನ್ನೂ ಅನುಸರಿಸಿ ಕುಳಿತಿದ್ದರು.

ರಾಜಕುಮಾರಿ ಅವರ ಎದುರಿಗೆ ಬಂದು, ಉದ್ದಕ್ಕೂ ನಡೆದು ಹೋದಳು. ಊಟಕ್ಕೆ ಕುಳಿತಿದ್ದ ಒಬ್ಬೊಬ್ಬನನ್ನೂ ನೋಡಿ, ಒಂದೊಂದು ರೀತಿ ಟೀಕೆ ಮಾಡಿದಳು. ಒಬ್ಬ ದಪ್ಪನಾಗಿದ್ದ. ಅವಳು ಅವನನ್ನು ನೋಡಿ, "ಹೆಂಡದ ಪೀಪಾಯಿಯ ಹಾಗಿದ್ದಾನೆ! ಗುಡಾಣದ ಹೊಟ್ಟೆ!" ಎಂದಳು. ಇನ್ನೊಬ್ಬ ಎತ್ತರವಾಗಿದ್ದ. ಅವನನ್ನು "ಅಡಕೆಯ ಮರ" ಎಂದು ವರ್ಣಿಸಿದಳು. ಮತ್ತೊಬ್ಬ ಸ್ವಲ್ಪ ಕುಳ್ಳಗಿದ್ದ. "ಗಿಡ್ಡಪುಟಾಣಿ! ಮೂರು ಮಾವಿನ ಕಾಯಿ ಉದ್ದ ಇದ್ದಾನೆ!" ಎಂದಳು. ಹೀಗೆಯೇ "ಮಂಗನ ಮೂತಿ," "ಸುಣ್ಣದ ಮುಖ," "ಬಕ್ಕತಲೆ," "ಗೂನು ಬೆನ್ನು," "ಒಂಟೆ," "ಆನೆ" ಮೊದಲಾದ ಬಗೆಬಗೆಯ ಬಿರುದುಗಳು ಬಂದವು. ಕೊನೆಯಲ್ಲಿ ಒಬ್ಬ ರಾಜ ಕುಳಿತಿದ್ದ. ರಾಜಕುಮಾರಿ ಅವನ ಕಡೆ ಕೈ ತೋರಿಸಿ, "ಇವನ ಮೀಸೆ ನೋಡಬಾರದೆ—ಒಳ್ಳೆ ಪೊರಕೆ ಇದ್ದ ಹಾಗಿದೆ! ಪೊದೆಯ ಹಾಗೆ ಗಡ್ಡ ಬೆಳೆಸಿದ್ದಾನೆ!" ಎಂದು ಗಹಗಹಿಸಿ ನಕ್ಕಳು. ಅವನಿಗೆ "ಪೊರಕೆ ಮೀಸೆಯ ರಾಜ" ಎಂದೇ ಹೆಸರಾಗಿ ಹೋಯಿತು!

ಮಗಳ ವರ್ತನೆಯನ್ನು ನೋಡಿ ರಾಜನಿಗೆ ಬಹಳ ಸಿಟ್ಟು ಬಂತು. "ಸಾಕು, ನಿಲ್ಲಿಸು ನಿನ್ನ ತಲೆಹರಟೆಯನ್ನು! ನಾಳೆ ಬೆಳಗಾಗಲಿ—ಯಾವ ಬಿಕ್ಷುಕ ಮೊದಲು ನಮ್ಮ ಅರಮನೆಯ ಬಾಗಿಲಿಗೆ ಬರುತ್ತಾನೋ ಅವನಿಗೆ ಕೊಟ್ಟು ಮದುವೆ ಮಾಡಿಬಿಡುತ್ತೇನೆ ನಿನ್ನನ್ನು!" ಎಂದು ರೇಗಿ, ಅವಳನ್ನು ಒಳಕ್ಕೆ ಕಳುಹಿಸಿದ.

ಮಾರನೆಯ ದಿನ ಒಬ್ಬ ಬಿಕ್ಷುಕ ಅರಮನೆಯ ಹೆಬ್ಬಾಗಿಲಿಗೆ ಬಂದು ಹಾಡುವುದಕ್ಕೆ ಮೊದಲುಮಾಡಿದ. ಆ ಹಾಡಿನ ಧ್ವನಿ ರಾಜನ ಕಿವಿಗೆ ಬಿದ್ದ ಕೂಡಲೆ, ಬಿಕ್ಷುಕನನ್ನು ಒಳಕ್ಕೆ ಕರೆತರಬೇಕೆಂದು ಅಪ್ಪಣೆಯಾಯಿತು.

ಕೊಳೆಯಾಗಿ ಹರಿದು ತುಂಡಾಗಿದ್ದ ಬಟ್ಟೆಗಳನ್ನು ಉಟ್ಟಿದ್ದ ಬಿಕ್ಷುಕನನ್ನು ಸೇವಕರು ಅರಮನೆಯೊಳಕ್ಕೆ ಕರೆದುಕೊಂಡು ಬಂದರು. ಅವನು ಮತ್ತೆ ರಾಜನ ಎದುರಿಗೆ ಹಾಡಿದ. ರಾಜಕುಮಾರಿಯೂ ಅಲ್ಲೇ ಇದ್ದಳು. ರಾಜ ಬಿಕ್ಷುಕನನ್ನು ಕುರಿತು "ನೀನು ಬಹಳ ಚೆನ್ನಾಗಿ ಹಾಡಿರುವೆ. ಅದಕ್ಕೆ ಪ್ರತಿಫಲವಾಗಿ ನನ್ನ ಮಗಳನ್ನು ನಿನಗೆ ಕೊಟ್ಟು ಮದುವೆ ಮಾಡುತ್ತೇನೆ" ಎಂದ.

ತಂದೆಯ ಮಾತನ್ನು ಕೇಳಿ ರಾಜಕುಮಾರಿಗೆ ಗಾಬರಿಯಿಂದ ನಡುಕ ಹುಟ್ಟಿತು. ಅವಳು "ಕೂಡದು! ಅಪ್ಪ, ಖಂಡಿತ ಕೂಡದು!" ಎಂದು ಅವನನ್ನು ಒಂದೇ ಸಮನೆ ಬೇಡಿಕೊಂಡಳು. ಆದರೆ ರಾಜನ ಮನಸ್ಸು ಕಲ್ಲಿನಂತೆ ಗಟ್ಟಿಯಾದುದು. ಒಂದು ಸಾರಿ ಯಾವುದಾದರೂ ನಿರ್ಧಾರಕ್ಕೆ ಬಂದುಬಿಟ್ಟರೆ, ಅನಂತರ ಏನೇ ಆಗಲ್ಪಿ ಅವನು ಅದನ್ನು ಬದಲಾಯಿಸುತ್ತಿರಲಿಲ್ಲ. ರಾಜಕುಮಾರಿ ಎಷು ಕಣ್ಣೀರು ಸುರಿಸಿದರೂ ಪ್ರಯೋಜನವಾಗಲಿಲ್ಲ. ಜೋಯಿಸರು ಬಂದರು. ಬಿಕ್ಷುಕನಿಗೂ ರಾಜಕುಮಾರಿಗೂ ಮದುವೆ ನಡೆದೇ ಹೋಯಿತು!

ಮದುವೆ ಆದ ಕೂಡಲೆ, ರಾಜ ಮಗಳನ್ನು ಕರೆದು, "ನೀನು ಈಗ ಬಿಕ್ಷುಕನ ಹೆಂಡತಿ. ಇನ್ನು ನೀನು ನನ್ನ ಅರಮನೆಯಲ್ಲಿರುವುದು ಸರಿಯಲ್ಲ. ನಿನ್ನ ಗಂಡನ ಜೊತೆಯಲ್ಲಿ ಹೊರಡು!" ಎಂದ.

ಬಿಕ್ಷುಕ ಹೆಂಡತಿಯನ್ನು ಕರೆದುಕೊಂಡು ಹೊರಟ. ಎಂದೂ ನೆಲದ ಮೇಲೆ ಕಾಲಿಡುವುದೇ ಅಭ್ಯಾಸವಿಲ್ಲದ ರಾಜಕುಮಾರಿ ಬಿಸಿಲಿನಲ್ಲಿ ಕಲ್ಲುಮುಳ್ಳುಗಳ ಮೇಲೆ ಬಾಯಿ ಮುಚ್ಚಿಕೊಂಡು ನಡೆಯಬೇಕಾಯಿತು.

ಒಂದೆರಡು ದಿನದಲ್ಲಿ ಅವರು ಒಂದು ದೊಡ್ಡ ಅರಣ್ಯಕ್ಕೆ ಬಂದರು. ಅದರ ತುಂಬಾ ಎಲ್ಲಿ ನೋಡಿದರೂ ಮರಗಿಡಗಳು ಸಾಲುಸಾಲಾಗಿ ಗುಂಪುಗುಂಪಾಗಿ ಬೆಳೆದು ನಿಂತಿದ್ದವು. ಕಾಡು ನೋಡುವುದಕ್ಕೆ ಬಹಳ ಸುಂದರವಾಗಿತ್ತು. ರಾಜಕುಮಾರಿ "ಈ ಅರಣ್ಯ ಯಾರಿಗೆ ಸೇರಿದುದು ?" ಎಂದು ಕೇಳಿದಳು.

ಬಿಕ್ಷುಕ "ಇದು ಪೊರಕೆ ಮೀಸೆಯ ರಾಜನದು. ನೀನು ಅವನನ್ನು ಮದುವೆಯಾಗಿದ್ದರೆ, ಇಷ್ಟು ಹೊತ್ತಿಗೆ ಇದಕ್ಕೆಲ್ಲಾ ಒಡೆಯಳಾಗಿರುತ್ತಿದ್ದೆ !" ಎಂದ.

ಅವಳು "ಅಯ್ಯೋ, ನನ್ನ ಬೆಪ್ಪುತನವೆ ! ಅವನನ್ನಾದರೂ ಮದುವೆಯಾಗಲು ಒಪ್ಪಿದ್ದರೆ, ಈ ತಿರುಕನನ್ನು ಕಟ್ಟಿಕೊಳ್ಳುವುದಕ್ಕಿಂತಲೂ ಎಷ್ಟೋ ಮೇಲಾಗಿರುತ್ತಿತ್ತು !" ಎಂದು ನಿಟ್ಟುಸಿರು ಬಿಟ್ಟಳು.

ಅನಂತರ ಬಹು ಸೊಂಪಾಗಿ ಬೆಳೆದಿದ್ದ ತೋಟಗಳೂ ಫಲವತ್ತಾದ ಹುಲ್ಲುಗಾವಲುಗಳೂ ಅವರ ಕಣ್ಣಿಗೆ ಬಿದ್ದವು. ರಾಜಕುಮಾರಿ "ಈ ತೋಟಗಳೂ ಹುಲ್ಲುಗಾವಲುಗಳೂ ಯಾರವು ?" ಎಂದು ಕೇಳಿದಳು.

ಬಿಕ್ಷುಕ "ಇವು ಪೊರಕೆ ಮೀಸೆಯ ರಾಜನದು. ನೀನು ಅವನನ್ನು ಮದುವೆಯಾಗಿದ್ದರೆ, ಇಷ್ಟು ಹೊತ್ತಿಗೆ ಇವಕ್ಕೆಲ್ಲಾ ಒಡೆಯಳಾಗಿರುತ್ತಿದ್ದೆ !" ಎಂದ.

ಅವಳು "ಅಯ್ಯೋ, ನನ್ನ ಬೆಪ್ಪುತನವೆ ! ಅವನನ್ನಾದರೂ ಮದುವೆಯಾಗಲು ಒಪ್ಪಿದ್ದರೆ, ಈ ತಿರುಕನನ್ನು ಕಟ್ಟಿಕೊಳ್ಳುವುದಕ್ಕಿಂತಲೂ ಎಷ್ಟೋ ಮೇಲಾಗಿರುತ್ತಿತ್ತು !" ಎಂದು ನಿಟ್ಟುಸಿರು ಬಿಟ್ಟಳು.

ಮುಂದೆ ಒಂದು ದೊಡ್ಡ ಪಟ್ಟಣ ಸಿಕ್ಕಿತು. ರಾಜಕುಮಾರಿ "ಯಾರದು ಈ ಸೊಗಸಾದ ಪಟ್ಟಣ?" ಎಂದಳು.

ಬಿಕ್ಷುಕ "ಇದು ಪೊರಕೆ ಮೀಸೆಯ ರಾಜನದು. ನೀನು ಅವನನ್ನು ಮದುವೆಯಾಗಿದ್ದರೆ, ಇಷ್ಟುಹೊತ್ತಿಗೆ ಇದಕ್ಕೆ ಒಡೆಯಳಾಗಿರುತ್ತಿದ್ದೆ!" ಎಂದ.

ಅವಳು "ಅಯ್ಯೋ, ನನ್ನ ಬೆಪ್ಪುತನವೆ! ಅವನನ್ನಾದರೂ ಮದುವೆಯಾಗಲು ಒಪ್ಪಿದ್ದರೆ, ಈ ತಿರುಕನನ್ನು ಕಟ್ಟಿಕೊಳ್ಳುವುದಕ್ಕಿಂತಲೂ ಎಷ್ಟೋ ಮೇಲಾಗಿರುತ್ತಿತ್ತು!" ಎಂದು ನಿಟ್ಟುಸಿರುಬಿಟ್ಟಳು.

ಬಿಕ್ಷುಕ ರೇಗಿ, "ಇದೇನಿದು! ನೀನು ಮದುವೆಯಾಗಿರುವ ಗಂಡ ನಾನು! ನನ್ನ ಎದುರಿಗೇನೇ ಅವನನ್ನು ಮದುವೆಯಾಗಿದ್ದರೆ ಮೇಲಾಗಿರುತ್ತಿತ್ತು, ಇವನನ್ನು ಮದುವೆಯಾಗಿದ್ದರೆ ಮೇಲಾಗಿರುತ್ತಿತ್ತು ಎಂದು ಗೋಳಾಡುತ್ತಿರುವೆ! ಪರಪುರುಷರ ಸುದ್ದಿ ನಿನಗೇಕೆ?" ಎಂದು ನಿಂದಿಸಿದ.

ಕಡೆಗೆ ಅವರು ಒಂದು ಸಣ್ಣ ಗುಡಿಸಲಿಗೆ ಬಂದರು. ರಾಜಕುಮಾರಿ "ಥೂ! ಎಂಥ ಅಸಹ್ಯಕರವಾದ ಸ್ಥಳ ಇದು! ಇಲಿಯ ಬಿಲ ಇದ್ದಹಾಗಿದೆ! ಯಾರದಪ್ಪ ಇದು?" ಎಂದು ತಿರಸ್ಕಾರದ ಧ್ವನಿಯಲ್ಲಿ ಕೇಳಿದಳು.

ಬಿಕ್ಷುಕ "ಅದೇ ನೀನೂ ನಾನೂ ಸಂಸಾರ ಮಾಡಿಕೊಂಡಿರಬೇಕಾದ ಮನೆ!" ಎಂದ.

ಅವಳು "ನಮ್ಮ ಮನೆಯೆ ಇದು? ಹಾಗಾದರೆ ಆಳುಗಳೆಲ್ಲಿ? ಎಂದಳು.

ಬಿಕ್ಷುಕ "ಆಳುಗಳು ನಮಗೇಕೆ? ನಾವೇನು ಶ್ರೀಮಂತರೆ? ಎಲ್ಲಾ ಕೆಲಸಗಳನ್ನೂ ನೀನೇ ಮಾಡಬೇಕು. ನನಗೆ ನಡೆದು ನಡೆದು ಆಯಾಸವಾಗಿದೆ. ಮೊದಲು ಮಲಗಿ ನಿದ್ದೆಹೋಗಬೇಕು. ಬೇಗ ಒಲೆ ಹೊತ್ತಿಸಿ, ನೀರು ಕಾಯಿಸಿ, ಅಡುಗೆ ಮಾಡು" ಎಂದ.

ರಾಜಕುಮಾರಿ ಹಿಂದೆ ಎಂದಾದರೂ ಒಲೆಯ ಮುಖವನ್ನು ನೋಡಿದ್ದರೆ ತಾನೆ ಅವಳಿಗೆ ಅಡುಗೆ ಮಾಡುವುದಕ್ಕೆ ಬರುವುದು!

ಬಿಕ್ಷುಕ ಅವಳ ಜೊತೆಯಲ್ಲೇ ಕುಳಿತುಕೊಂಡು "ಹೀಗೆ—ಹೀಗೆ" ಎಂದು ಎಲ್ಲವನ್ನೂ ತೋರಿಸಿಕೊಡಬೇಕಾಯಿತು.

ಊಟವಾದ ಮೇಲೆ ಇಬ್ಬರೂ ಮಲಗಿ ನಿದ್ದೆಹೋದರು. ಆದರೆ ಬೆಳಗಿನ ಜಾವಕ್ಕೆ ಮುಂಚೆಯೇ ಬಿಕ್ಷುಕ "ಏಳು! ಏಳು! ಹೊತ್ತಾಯಿತು! ಮನೆಯನ್ನೆಲ್ಲಾ ಚೊಕ್ಕಟಮಾಡಬೇಕು! ಇನ್ನೂ ಎಷ್ಟೋ ಕೆಲಸವಿದೆ, ಎಮ್ಮೆಯಹಾಗೆ ಬಿದ್ದುಕೊಂಡಿದ್ದೀಯಲ್ಲ!" ಎಂದು ಹೆಂಡತಿಯನ್ನು ಅಲ್ಲಾಡಿಸಿ ಎಬ್ಬಿಸಿಬಿಟ್ಟ. ಪಾಪ, ರಾಜಕುಮಾರಿ ತಂದೆಯ ಮನೆಯಲ್ಲಿದ್ದಾಗ ಬಿಸಿಲು ಬರುವುದಕ್ಕೆ ಮೊದಲು ಕಣ್ಣು ತೆರೆದವಳೇ ಅಲ್ಲ!

ಕೆಲವು ದಿನ ಕಳೆದವು. ಮನೆಯಲ್ಲಿದ್ದ ಪದಾರ್ಥಗಳೆಲ್ಲಾ ಮುಗಿದುಹೋದವು. ಬಿಕ್ಷುಕ ಹೆಂಡತಿಯನ್ನು ಕರೆದು, "ನಾವು ಇನ್ನು ಹೀಗೆ ಸೋಮಾರಿಗಳಾಗಿರುವುದು ಸಾಧ್ಯವಿಲ್ಲ. ಸಂಪಾದನೆ ಏನೂ ಇಲ್ಲದೆ ಸುಮ್ಮನೆ ಕುಳಿತು ತಿನ್ನುತ್ತಿದ್ದರೆ ಎಷ್ಟು ದಿವಸ ನಡೆಯುತ್ತೆ? ನೀನು ಯಾವುದಾದರೂ ಕೆಲಸ ಕಲಿತುಕೊಳ್ಳಲೇ ಬೇಕು. ಇಗೋ—ಬಿದಿರು ತಂದು ಇಟ್ಟಿದ್ದೇನೆ. ಬುಟ್ಟಿ ಹೆಣೆಯುವುದನ್ನು ಅಭ್ಯಾಸಮಾಡು" ಎಂದು ಆಜ್ಞಾಪಿಸಿದ.

ಒಂದು ಬಿದುರನ್ನು ಹಿಡಿದು ಸೀಳುತ್ತಿದ್ದ ಹಾಗೆಯೇ ರಾಜಕುಮಾರಿಯ ಬೆರಳುಗಳಿಂದ ಗಳಗಳನೆ ರಕ್ತ ಸುರಿಯಿತು. ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು.

ಬಿಕ್ಷುಕ "ಈ ಕೆಲಸ ನಿನ್ನಿಂದ ಆಗುವುದಿಲ್ಲ. ಹೋಗಲಿ—ದಾರ ನೂಲುವುದನ್ನಾದರೂ ಕಲಿತುಕೊ" ಎಂದು ಒಂದು ತಕಲಿಯನ್ನೂ ಒಂದಿಷ್ಟು ಹತ್ತಿಯನ್ನೂ ಎಲ್ಲಿಂದಲೋ ತಂದುಕೊಟ್ಟ.

ರಾಜಕುಮಾರಿ ತಕಲಿಯನ್ನು ಒಂದೆರಡು ಸಾರಿ ತಿರುಗಿಸುವಷ್ಟರಲ್ಲಿ ಅದರ ತುದಿ ಅವಳ ಬೆರಳಿಗೆ ಚುಚ್ಚಿ ಮತ್ತೆ ರಕ್ತ ಉಕ್ಕಿತು.

ಬಿಕ್ಷುಕ ಬಹಳ ಅಸಮಾಧಾನಪಟ್ಟವನಂತೆ ಮುಖ ಚಿಕ್ಕದು ಮಾಡಿಕೊಂಡ. "ನೀನೊಬ್ಬಳು ಶುದ್ಧ ಅಪ್ರಯೋಜಕಳು! ನಿನ್ನ ಕೈಯಲ್ಲಿ ಒಂದು ಕೆಲಸವೂ ಆಗುವುದಿಲ್ಲ! ತಿಂದು ಗೊಂಬೆಯ

ಹಾಗೆ ಕೂತಿರು ಎಂದರೆ ಇರುತ್ತೀಯ! ನಿನ್ನಂಥ ಹೆಂಡತಿಯನ್ನು ಗಂಟುಹಾಕಿಕೊಂಡು ನಾನು ಹೇಗೆ ಬಾಳುವುದೊ ಕಾಣೆ! " ಎಂದು ಕೂಗಾಡಿದ. ಕಡೆಗೆ " ಹೋಗಲಿ, ಕೆಲವು ಮಡಕೆಗಳನ್ನಾದರೂ ತಂದು ಕೊಡುತ್ತೇನೆ. ಅವನ್ನು ಸಂತೆಗೆ ತೆಗೆದುಕೊಂಡು ಹೋಗಿ ಮಾರಾಟ ಮಾಡಿ ಬಾ. ಅಷ್ಟಾದರೂ ಆಗುತ್ತದೆಯೋ ಇಲ್ಲವೋ ?" ಎಂದ.

ಅವಳು " ಅಯ್ಯೊ, ನಾನು ಸಂತೆಯಲ್ಲಿ ನಿಂತು ಮಡಕೆಗಳನ್ನು ಮಾರುತ್ತಿರುವಾಗ ನನ್ನ ತಂದೆಯ ಕಡೆಯವರು ಯಾರಾದರೂ ಅಲ್ಲಿಗೆ ಬಂದು ನೋಡಿದರೆ ಎಷ್ಟು ನಗುತ್ತಾರೆ! ನನ್ನ ಗೌರವ ಏನಾಗುತ್ತದೆ!" ಎಂದಳು.

ಭಿಕ್ಷುಕ " ಆ ವಿಚಾರ ನನಗೇಕೆ ? ಸುಮ್ಮನೆ ಹೇಳಿದಷ್ಟು ಕೆಲಸ ಮಾಡು ! " ಎಂದ.

ರಾಜಕುಮಾರಿ ಮಡಕೆಗಳನ್ನು ಒಯ್ದು ಸಂತೆಯ ಮಧ್ಯೆ ಹರಡಿಕೊಂಡು ನಿಂತಳು. ವ್ಯಾಪಾರ ಚೆನ್ನಾಗಿಯೇ ನಡೆಯಿತು. ಅವಳು ಬಹಳ ಚೆಲುವೆ. ಆದ್ದರಿಂದ ಮಡಕೆ ಬೇಡದಿದ್ದರೂ, ಎಷ್ಟೋ ಜನ ಮಡಕೆ ಮಾರುವವಳನ್ನು ನೋಡಿ ಮಾತಾಡಿಸುವ ಉದ್ದೇಶದಿಂದ ಕೊಳ್ಳುವ ನೆಪದಲ್ಲಿ ಅಲ್ಲಿಗೆ ಬಂದು ಅವಳು ಕೇಳಿದಷ್ಟು ದುಡ್ಡು ಕೊಟ್ಟು ಹೋಗುತ್ತಿದ್ದರು.

ಒಂದುದಿನ ರಾಜಕುಮಾರಿ ಹೊಸ ಮಡಕೆಗಳನ್ನು ಮಾರಾಟಕ್ಕಿಟ್ಟುಕೊಂಡು ಸಂತೆಯಲ್ಲಿ ಕುಳಿತಿದ್ದಳು. ಕುಡಿದು, ಅಮಲು ಏರಿ, ಮೈಮೇಲೆ ಪ್ರಜ್ಞೆಯೇ ಇಲ್ಲದವನಂತೆ ಕಾಣುತ್ತಿದ್ದ ಒಬ್ಬ ಕುದುರೆಯ ಸವಾರ ಆಕಡೆ ಬಂದ. ಅವನು ಎಲ್ಲೋ ನೋಡುತ್ತ, ರಾಜಕುಮಾರಿಯ, ಮಡಕೆಗಳ ಮೇಲೆ ಕುದುರೆಯನ್ನು ಓಡಿಸಿದ. ಮಡಕೆಗಳೆಲ್ಲಾ ಚೂರು ಚೂರಾದವು. ಅವಳಿಗೆ ದಿಕ್ಕು ತೋಚದಂತಾಯಿತು. " ಅಯ್ಯೋ, ಇನ್ನೇನು ಗತಿ! ನನ್ನ ಗಂಡ ಎಷ್ಟು ಸಿಟ್ಟುಮಾಡಿಕೊಳ್ಳುತ್ತಾನೋ ಏನೋ!" ಎಂದು ಅಳುತ್ತ ಅವಳು ಮನೆಗೆ ಹೋಗಿ, ನಡೆದಿದ್ದುದನ್ನೆಲ್ಲಾ ಭಿಕ್ಷುಕನಿಗೆ ತಿಳಿಸಿದಳು.

ಅವನು "ನೀನೆಂತಹ ತಿಳಿಗೇಡಿ! ಮಡಕೆಗಳನ್ನು ಯಾರಾದರೂ ಸಂತೆಯ ನಡುವೆ ಹರಡಿಕೊಳ್ಳುತ್ತಾರೆಯೆ? ಒಂದು ಮಗ್ಗುಲಿಗೆ ಜೋಪಾನವಾಗಿಟ್ಟುಕೊಂಡು ಕುಳಿತಿರಬೇಕು ಎನ್ನುವಷ್ಟು ಬುದ್ಧಿ ಇಲ್ಲವೆ ನಿನಗೆ? ಸಾಕು ನಿಲ್ಲಿಸು ನಿನ್ನ ಅಳುವನ್ನು! ನಿನ್ನ ಕೈಯಲ್ಲಿ ಯಾವ ಕೆಲಸವೂ ಆಗುವುದಿಲ್ಲ! ಪಕ್ಕದ ಊರಿನ ರಾಜರ ಮನೆಯಲ್ಲಿ ಕೆಲಸಕ್ಕೆ ಹೆಣ್ಣಾಳುಗಳು ಬೇಕಾಗಿದ್ದಾರಂತೆ. ರಾಜರು ನನಗೆ ಚೆನ್ನಾಗಿ ಗೊತ್ತಿದ್ದಾರೆ. ಎಷ್ಟೋಸಾರಿ, ನಾನು ಭಿಕ್ಷಕ್ಕೆ ಹೋದಾಗ, ಒಳಕ್ಕೆ ಕರೆದು, ನನ್ನಿಂದ ಹಾಡು ಹೇಳಿಸಿ ಕೇಳಿ, ಸಂತೋಷಪಟ್ಟಿದ್ದಾರೆ. ಈಗ ನಾನು ಹೋಗಿ ಬೇಡಿಕೊಂಡರೆ ನಿನಗೆ ಒಂದು ಕೆಲಸವನ್ನು ಕೊಡಿಸಿ ಕೊಟ್ಟಾರು. ಬಾ, ಹೊರಡು. ಅಲ್ಲಿ ನೀನು ಬೇಕಾದ ಹಾಗೆ ಮೆರೆದು ಕೊಬ್ಬಬಹುದು!" ಎಂದ.

ರಾಜಕುಮಾರಿ ಮಾತಾಡಿದರೆ ಇನ್ನೇನು ಬೈಗಳು ಬೀಳುವುವೋ ಎಂದು ಹೆದರಿ, ಮೌನವಾಗಿ ತಲೆ ತಗ್ಗಿಸಿಕೊಂಡು ಅವನನ್ನು ಹಿಂಬಾಲಿಸಿದಳು. ಅವಳಿಗೆ ಅರಮನೆಯ ಅಡುಗೆಯ ಮನೆಯಲ್ಲಿ ಮುಸುರೆ ತೊಳೆಯುವ ಕೆಲಸ ಸಿಕ್ಕಿತು. ಎಲ್ಲರೂ ಉಂಡು ಉಳಿದ ತಂಗಳನ್ನು ಅವಳು ಸೀರೆಯ ಸೆರಗಿನಲ್ಲಿ ಮುಚ್ಚಿಟ್ಟುಕೊಂಡು ಮನೆಗೆ ತರುತ್ತಿದ್ದಳು. ಅದನ್ನು ತಿಂದುಕೊಂಡಿದ್ದು ಭಿಕ್ಷುಕನೂ ಅವಳೂ ಸ್ವಲ್ಪಕಾಲ ಜೀವನ ನಡೆಸಿದರು.

ಒಂದುದಿನ ರಾಜಕುಮಾರಿ ಕೆಲಸಕ್ಕೆಂದು ಅರಮನೆಗೆ ಹೋದಾಗ ಅಲ್ಲಿ ಇದ್ದಕ್ಕಿದ್ದಂತೆ ಎಲ್ಲೆಲ್ಲಿಯೂ ಸಂಭ್ರಮ ತುಂಬಿತ್ತು. ಕಾರಣವೇನೆಂದು ಅವಳು ವಿಚಾರಿಸಿದಳು. ರಾಜನ ಹಿರಿಯ ಮಗನಿಗೆ ಆ ದಿವಸ ಮದುವೆ ಎಂದು ತಿಳಿದು ಬಂತು. ಅವಳು ಎಲ್ಲವನ್ನೂ ನೋಡಬೇಕೆಂಬ ಕುತೂಹಲದಿಂದ ಒಂದು ಮೂಲೆಯಲ್ಲಿ ನಿಂತುಕೊಂಡಳು. ಆಸ್ಥಾನಿಕರೂ ಅವರ ಹೆಂಡಿರೂ ಬೆಲೆಬಾಳುವ ಬಟ್ಟೆಗಳನ್ನೂ ಹೊಳೆ ಹೊಳೆಯುವ ಆಯುಧಗಳನ್ನೂ ಥಳಥಳಿಸುವ ಆಭರಣಗಳನ್ನೂ ಧರಿಸಿ, ಸಡಗರದಿಂದ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಓಡಾಡುತ್ತಿದ್ದರು. ರಾಜಕುಮಾರಿಗೆ ತನ್ನ ಹಿಂದಿನ ಕೀಳುಗತಿಯನ್ನು

ನೆನಸಿಕೊಂಡು ಬಲು ದುಃಖವಾಯಿತು. ತನ್ನ ಮಿತಿಮೀರಿದ ಗರ್ವದಿಂದಲೇ ತಾನು ಹಾಗಾದುದು ಎಂದು ಯೋಚಿಸಿದಾಗ ಮತ್ತಷ್ಟು ಸಂಕಟವಾಯಿತು. ಇನ್ನೊಂದು ಕ್ಷಣವೂ ಅಲ್ಲಿರಲು ಅವಳಿಗೆ ಮನಸ್ಸು ಬರಲಿಲ್ಲ. ಅಷ್ಟರಲ್ಲಿ ರಾಜನ ಪರಿಚಾರಕರು ಎಲ್ಲರಿಗೂ ತಿಂಡಿಯ ಪದಾರ್ಥಗಳನ್ನು ಹಂಚಿದರು. ಅವನ್ನು ಬೇಗ ಬೇಗ ಒಂದು ಬುಟ್ಟಿಯಲ್ಲಿಟ್ಟುಕೊಂಡು ಅವಳು ಮನೆಗೆ ಹಿಂದಿರುಗಬೇಕೆಂದು ಹೊರಟಳು.

ಅವಳು ಒಳಗಿನಿಂದ ಬಾಗಿಲಿಗೆ ಬರುವ ಹೊತ್ತಿಗೆ ಸರಿಯಾಗಿ ಮದುವಣಿಗ ಹೊರಗಿನಿಂದ ಅದೇ ಸ್ಥಳಕ್ಕೆ ಬಂದ. ಅವಳು ಮರ್ಯಾದೆಯಿಂದ ಒಂದು ಕಡೆಗೆ ಸರಿದು ನಿಂತಳು. ಮದುವಣಿಗ ಅವಳನ್ನು ನೋಡಿದ ಕೂಡಲೆ ತಾನೂ ನಿಂತು ಅವಳ ಕೈ ಹಿಡಿದುಕೊಂಡ. ಅವಳಿಗೆ ಮೈಯೆಲ್ಲಾ ತರತರ ನಡುಗಿತು. ಕಣ್ಣೆತ್ತಿ ನೋಡುತ್ತಾಳೆ — ಮದುವಣಿಗ ಬೇರೆ ಯಾರೂ ಅಲ್ಲ, ಪೊರಕೆ ಮೀಸೆಯ ರಾಜ! ಅವನು ಅವಳನ್ನು ಲೇವಡಿ ಮಾಡುವವನಂತೆ ಕಿರುನಗೆ ನಗುತ್ತಿದ್ದ. ಅವಳು ಕೈಬಿಡಿಸಿಕೊಳ್ಳಬೇಕೆಂದು ಎಷ್ಟೆಷ್ಟೋ ಪ್ರಯತ್ನಿಸಿದಳು. ಸಾಧ್ಯವಾಗಲಿಲ್ಲ. ಅವನು ಅವಳನ್ನು ಬಿಡದೆ ಒಳಕ್ಕೆ ಎಳೆದುಕೊಂಡು ಹೋದ. ಹೀಗೆ ಹೋಗುವಾಗ ಅವಳ ಸೆರಗಿನಲ್ಲಿ ಮರೆಯಾಗಿದ್ದ ಬುಟ್ಟಿ ಜಾರಿಬಿತ್ತು. ಅದರ ಒಳಗಿದ್ದ ತಿಂಡಿಯ ಪದಾರ್ಥಗಳು ಕೆಳಕ್ಕುರುಳಿ ಚೆಲ್ಲಾಪಿಲ್ಲಿಯಾದವು. ಇದನ್ನು ಕಂಡು ಅಲ್ಲಿದ್ದವರೆಲ್ಲಾ ಕಿಲಕಿಲನೆ ನಕ್ಕರು. ರಾಜಕುಮಾರಿಗೆ ನಾಚಿಕೆಯಿಂದ ಮುಖವೆಲ್ಲಾ ಕೆಂಪಗಾಯಿತು; "ಇಲ್ಲೇ ನನ್ನ ಪ್ರಾಣ ಹೋಗಿಬಿಡಬಾರದೆ!" ಎನ್ನಿಸುವಷ್ಟು ಅವಮಾನವಾಯಿತು. ಮತ್ತೆ ಅವಳು ಪ್ರಯತ್ನಪಟ್ಟು ಹೇಗೋ ರಾಜನ ಕೈಯಿಂದ ತಪ್ಪಿಸಿಕೊಂಡು, ಬಾಗಿಲ ಕಡೆಗೆ ಓಡಿದಳು.

ರಾಜ ಅವಳ ಹಿಂದೆಯೇ ಚಿಮ್ಮಿದ. ಅವಳು ಹೊಸಲು ದಾಟುವ ಹೊತ್ತಿಗೆ ಸರಿಯಾಗಿ ಅವಳನ್ನು ತಡೆದು ನಿಲ್ಲಿಸಿ, "ಹೆದರಿಕೊಳ್ಳಬೇಡ. ಇಷ್ಟು ದಿನಗಳೂ ಬಿಕ್ಷುಕನ ಹಾಗ ನಿನ್ನ ಜೊತೆಯಲ್ಲಿ ಬಾಳುತ್ತಿದ್ದವನು ನಾನೇ! ನಿನ್ನ ಮೇಲೆ ನನಗೆ ಬಹಳ ಪ್ರೇಮವಿದ್ದುದ

ರಿಂದ ನಿನ್ನನ್ನು ಮದುವೆಯಾಗಿ ಆ ಗುಡಿಸಲಿಗೆ ಕರೆತಂದೆ. ನೀನು ಸಂತೆಯಲ್ಲಿ ಮಡಕೆಗಳನ್ನು ಮಾರುತ್ತಿದ್ದಾಗ ಕುದುರೆಯ ಮೇಲೆ ಬಂದು ಅವನ್ನು ಒಡೆದುಹಾಕಿದವನೂ ನಾನೇ! ನಿನ್ನ ಗರ್ವಕ್ಕೆ ತಕ್ಕ ಶಿಕ್ಷೆ ಕೊಡಬೇಕೆಂದು ಹೀಗೆಲ್ಲಾ ಮಾಡಿದೆ. ಈಗ ನಿನಗೆ ಬುದ್ಧಿ ಬಂದಿದೆ. ನೀನು ಪಶ್ಚಾತ್ತಾಪಪಡುತ್ತಿರುವೆಯೆಂದು ನಿನ್ನ ಕಣ್ಣು ಗಳೇ ಹೇಳುತ್ತಿವೆ. ಇನ್ನು ನಮ್ಮ ಮದುವೆ ವಿಜೃಂಭಣೆಯಿಂದ ನಡೆ ಯಲಿ" ಎಂದ.

ಅನಂತರ ಸೇವಕಿಯರು ರಾಣಿಗೆ ಯೋಗ್ಯವಾದ ಉಡುಪನ್ನು ತಂದು ಅವಳನ್ನು ಅಲಂಕರಿಸಿದರು. ಅವಳ ತಂದೆತಾಯಿಗಳೂ ತವರು ಮನೆಯ ಇತರ ನಂಟರಿಷ್ಟರೂ ಅವಳಿಗೆ ಗೊತ್ತಿಲ್ಲದಂತೆ ಆಗಲೇ ಅಲ್ಲಿಗೆ ಬಂದಿದ್ದರು. ಎಲ್ಲರೂ ಅವಳಿಗೆ ಒಳ್ಳೆಯದಾಗಲಿ ಎಂದು ಹರಸಿದರು. ಎಲ್ಲೆಲ್ಲೂ ಸಂತೋಷ ಹೊಮ್ಮಿತು. ಯಾರ ಮುಖದಲ್ಲಿ ನೋಡಿದರೂ ನಗೆಮೂಡಿತು.

ಕನ್ನಡದ ಶಿಶುಸಾಹಿತ್ಯ ಭಂಡಾರಕ್ಕೆ

# ಹೊಸದಾಗಿ ಸೇರಿದ ಅಮೂಲ್ಯ ರತ್ನಗಳು !

## ಚಕ್ರವರ್ತಿಯ ಕೋಗಿಲೆ

[ಹ್ಯಾನ್ಸ್ ಕ್ರಿಶ್ಚಿಯನ್ ಅಂಡರ್‌ಸನ್ನನ ಏಳು ಕಥೆಗಳು]

ಅನುವಾದಕರು:

**ಎಂ. ರಾಮರಾವ್, ಎಂ.ಎ., ಬಿ.ಟಿ.**

"ಒಂದೊಂದು ಕಥೆಯೂ ಒಂದೊಂದು ವಯಸ್ಸಿನ ಮಕ್ಕಳಿಗೆ ಹಿಡಿಸುತ್ತದೆ ಎನ್ನಬಹುದು. ಕಥೆಗಳಲ್ಲಿ ಬಹುಮಟ್ಟಿಗೆ ನೀತಿಯೂ, ಸಾಹಸವೂ ಕುತೂಹಲವನ್ನು ಕೆರಳಿಸುವ ಗುಣವೂ ಸಹಜವಾಗಿ ಬೆರೆತು ಬಂದಿದೆ. ಲೇಖಕರ ಅನುವಾದ ಶೈಲಿ ಸರಳವಾಗಿದೆ. ಮಕ್ಕಳ ಕೈಗೆ ಮುದ್ದಾದ ಕಾಣಿಕೆ."

— ಪುಸ್ತಕ ಪ್ರಪಂಚ, ಮೈಸೂರು

"ಮೂಲದ ಹದ ಎಳ್ಳಷ್ಟೂ ಕೆಡದಂತೆ ನಮ್ಮ ಕನ್ನಡ ಜನ ಜೀವನಕ್ಕೆ ಒಗ್ಗುವ ರೀತಿಯಲ್ಲಿ ಸನ್ನಿವೇಶಗಳನ್ನು ಮಾರ್ಪಡಿಸಿ ಕೊಂಡು ರುಚಿಕಟ್ಟಾಗಿ ಚಿತ್ರಿಸಿದ್ದಾರೆ."

— ಸಂಜಯ, ದಾವಣಗೆರೆ

"ಹಿರಿಯರು ಕೂಡ ಇವನ್ನು ಓದಿದಾಗ ತುಸು ಹೊತ್ತು ತಮ್ಮ ಸಂಶಯದ ಪೊರೆ ಕಳಚಿ ಮಕ್ಕಳಲ್ಲಿ ಮಕ್ಕಳಾಗಿ ನಕ್ಕುನಲಿಯುವುದರಲ್ಲಿ ಸಂದೇಹವಿಲ್ಲ.

— ದೇಶಬಂಧು, ಬೆಂಗಳೂರು

## ಗ್ರಿಮ್ ಸಹೋದರರ ಕತೆಗಳು

ಕನ್ನಡಿಸಿದವರು :

ಎಂ. ರಾಮರಾವ್, ಎಂ.ಎ., ಬಿ.ಟಿ

ಮಂಜಿನ ಮಣಿ .... (೧೧ ಕಥೆಗಳು)

ಜೀವರಸ .... (೮ ಕಥೆಗಳು)

ಚಿಪ್ಪಿಗನ ಸಾಹಸ .... (೧೨ ಕಥೆಗಳು)

— ಬರಲಿದೆ —

ಜಲಕನ್ನಿಕೆ ( ಸುಮಾರು ೧೦ ಕಥೆಗಳು)

ಒಂದೊಂದು ಪುಸ್ತಕವೂ ಬಗೆಬಗೆಯ ತಿನಿಸುಗಳನ್ನು ಒಳಗೊಂಡ ಹಬ್ಬದೂಟ.

ಇವನ್ನು ಓದುವುದೆಂದರೆ ಹುಡುಗರಿಗೊಂದು ಆಟ.

ಉಕ್ಕಿ ಬರುವುದು ನಲುಮೆ !

ನಗುವಿನ ಚಿಲುಮೆ !

# ಕೆಲವು ಅಭಿಪ್ರಾಯಗಳು

---

"ಕಥೆಗಳು ಮಕ್ಕಳ ಕುತೂಹಲವನ್ನು ಕೆರಳಿಸುವುದು ಮಾತ್ರವಲ್ಲದೆ, ಅವರ ನಿರ್ಮಲ ಮನಸ್ಸಿಗನುಗುಣವಾದ ನೀತಿಪಾಠವನ್ನು ಅವುಗಳಲ್ಲಿ ಅಡಗಿಸಿಟ್ಟಿರುವ ಕತೆಗಾರರ ಕೌಶಲ ಮೆಚ್ಚತಕ್ಕದ್ದೆ.

"ಶ್ರೀಮಾನ್ ರಾಮರಾಯರ ಅನುವಾದವು ಸರಳವಾಗಿದೆ, ಸಹಜವಾಗಿದೆ, ಮನಸ್ಸಿಗೆ ನಾಟುವಂತಿದೆ."

**—ದೇಶಬಂಧು, ಬೆಂಗಳೂರು**

"ಕತೆಗಳ ಅನುವಾದ, ಅದನ್ನು ನಮ್ಮ ಬಾಲಕ ಬಾಲಕಿಯರಿಗೆ ಅರ್ಥವಾಗುವಂತೆ ಅಳವಡಿಸಿಕೊಂಡಿರುವುದು ಪ್ರಶಂಸಾರ್ಹವಾಗಿವೆ."

**—ತಾಯಿನಾಡು, ಬೆಂಗಳೂರು**

"ಈ ಕಥೆಗಳಲ್ಲಿ ಒಂದೊಂದೂ ತುಂಬಾ ವಿನೋದಕರವೂ ನೀತಿಬೋಧಕವೂ ಆಗಿದೆ. ಸರಳವಾದ ತಿಳಿಗನ್ನಡ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ನಮ್ಮ ಭಾಷೆಗೂ ನಮ್ಮ ಕಥಾ ಪ್ರಪಂಚಕ್ಕೂ ಹೊಸದಾಗಿರುವ ನೂತನ ಮಾದರಿಯ ಈ ಬಗೆಯ ಕಥೆಗಳನ್ನು ಒದಗಿಸಿಕೊಟ್ಟಿದಕ್ಕಾಗಿ ಲೇಖಕರಿಗೆ ಅಭಿನಂದನೆಗಳು."

**—ಸುಬೋಧ, ಬೆಂಗಳೂರು**

---